ಶ್ರೀ

# ಶ್ರೀ ರಾಮೋದಂತಂ

ಎಂ. ಆರ್. ನರಸಿಂಹನ್

೧೯೯೪

ಶ್ರೀ

# ಶ್ರೀ ರಾಮೋದಂತಂ

( ಪರಮೇಶ್ವರ ಕವಿ ಕೃತ )

ಕನ್ನಡದಲ್ಲಿ

ಅರ್ಥ ತಾತ್ಪರ್ಯಗಳೊಡನೆ ಸಿದ್ಧಪಡಿಸಿದವರು

**ಎಂ. ಆರ್. ನರಸಿಂಹನ್**

೧೯೯೪

Sree Ramodantam, a Sanskrit poetic work of Sri Parameshwara a Keralite poet Transliterated into Kannada with word by word meaning and purport of the text rendered by M. R Narasimhan, 5/1, "Thiruvengadam", Mahanth's Layout Bull Temple Road, Bangalore-560 019.

First Edition : 1994.

Copies : 1000



Published with the Financial assistance of Tirumala Tirupati Devasthanams under their scheme "Aid to Publish Religious Works."

Price : Rs. 15 - 00

ಬೆಲೆ : ರೂ. ೧೫-೦೦

ಪ್ರಕಾಶಕರು : ಎಂ. ಆರ್. ನರಸಿಂಹನ್,
೫/೧, 'ತಿರುವೇಂಗಡಂ', ಮಹಂತ್ಸ್ ಲೇ ಔಟ್,
ಬುಲ್ ಟೆಂಪಲ್ ರಸ್ತೆ, ಬೆಂಗಳೂರು-೫೬೦ ೦೧೯.

ಮುದ್ರಕರು : ಸುಬೋಧ ಮುದ್ರಣಾಲಯ,
ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮.

# ಪ್ರಸ್ತಾವನೆ

ಶ್ರೀ ರಾಮಾಯಣ ಸಂಗ್ರಹದಂತೆಯೇ ಶ್ರೀರಾಮೋದಂತವೂ ಸಹ ಕಂಠಪಾಠ ಮತ್ತು ಪಾರಾಯಣ ಮಾಡಲು ಯೋಗ್ಯವಾದ ಒಂದು ಲಘು ಸ್ತೋತ್ರಕಾವ್ಯ. ಕಿರಿಯರು ಪ್ರತಿದಿನವೂ ಒಂದೊಂದು ಕಾಂಡದಂತೆ ಹೇಳಬಹುದು. ವಿಶೇಷ ದಿವಸಗಳಾದ ರಾಮನವಮಿ, ವಿಜಯದಶಮಿ ಮುಂತಾದ ಸಂದರ್ಭಗಳಲ್ಲಿ ಶ್ರೀರಾಮೋದಂತವನ್ನು ಸಮಗ್ರವಾಗಿಯೇ ಪಾರಾಯಣಮಾಡಿ ಶ್ರೀರಾಮ ಪಟ್ಟಾಭಿಷೇಕವನ್ನು ನೆರವೇರಿಸಬಹುದು. ಹಯಗ್ರೀವ ಪೂಜೆಯಂದು ಪುಸ್ತಕವನ್ನು ಪೂಜಿಸಬಹುದು. ಸಮಗ್ರ ರಾಮೋದಂತ ಪಾರಾಯಣವು ಅರ್ಧ ಗಂಟೆಯಿಂದ ಒಂದು ಗಂಟೆಯಮೇಲೆ ಹೋಗುವುದಿಲ್ಲ. ಅದು ಆಸ್ತಿಕರ ಶ್ರದ್ಧೆಯನ್ನು ಅವಲಂಬಿಸಿರುತ್ತದೆ.

ಕಿರಿಯರಿಗೆ ಸಂಸ್ಕೃತಜ್ಞಾನ ವೃದ್ಧಿಯಾಗುತ್ತದೆ. ಹೊಸ ಹೊಸ ಪದಪರಿಚಯ, ವ್ಯಾಕರಣಜ್ಞಾನ, ಪದವ್ಯುತ್ಪತ್ತಿಯ ಅರಿವು ಏರ್ಪಡುತ್ತದೆ ಸಂಸ್ಕೃತವೇ ತಿಳಿಯದ ಜನರಿಗೂ ಆ ಭಾಷೆಯ ಸೊಬಗಿನ ಪರಿಚಯವುಂಟಾಗಿ ಆ ಭಾಷೆಯನ್ನು ಇನ್ನೂ ಹೆಚ್ಚಾಗಿ ತಿಳಿಯಬೇಕೆನ್ನುವ ಆಸೆ ಜಾಗೃತಿಗೊಳ್ಳುತ್ತದೆ. ರಾಮಾಯಣ ಪಾರಾಯಣದಿಂದ ಒಂದು ರೀತಿಯ ಸಂಸ್ಕೃತಿ ಒಡಮೂಡುತ್ತದೆ ಎಂದರೆ ಸುಳ್ಳಲ್ಲ.

ಕನ್ನಡದಲ್ಲಿ ಇಂತಹ ಪ್ರಯತ್ನ ಈವರೆಗೂ ನಡೆದಿಲ್ಲ. ಇದರ ಕಡೆಗೆ ಯಾರೂ ಗಮನ ಹರಿಸಿಲ್ಲ. ಈ ಪ್ರಯತ್ನ ಮೊದಲನೆಯದು ಎನ್ನಲೇಬೇಕು. ಅದಕ್ಕಾಗಿಯೇ ಕನ್ನಡ ಲಿಪಿಯಲ್ಲಿ ಶ್ಲೋಕವನ್ನು ಮುದ್ರಿಸಿ ಅರ್ಥ ತಾತ್ಪರ್ಯಗಳೊಡನೆ ಪ್ರಕಾಶಿಸುವ ಪ್ರಯತ್ನ ಮಾಡಲಾಗಿದೆ. ಇದರಿಂದ ಕನ್ನಡ ಸಾಹಿತ್ಯಕ್ಕೂ ಸೇವೆ ಸಲ್ಲುತ್ತದೆ. ಅಂತೂ ಇದರ ಪ್ರಯೋಜನವನ್ನು ಕನ್ನಡಿಗರು ಪಡೆದು ಆನಂದಿಸಿದರೆ ನನ್ನ ಪ್ರಯತ್ನ, ಶ್ರಮ, ಆಶಯ ಸಾರ್ಥಕವೆನಿಸುತ್ತದೆ.

ಶ್ರೀರಾಮೋದಂತದ ಶೈಲಿ ಶ್ರೀ ರಾಮಾಯಣ ಸಂಗ್ರಹದಷ್ಟು ಪ್ರೌಢವಾಗಿಲ್ಲ, ಆಕರ್ಷಕವಾಗಿಲ್ಲ, ನಿಜ. ಅದರಲ್ಲಿ ಕಂಡುಬರುವ ಅಲಂಕಾರ ಚಮತ್ಕಾರ, ಪ್ರಾಸಹಾಸಗಳು ಇಲ್ಲಿ ಇಲ್ಲ. ಆದರೆ ಇದು ಕಿರಿಯರಿಗಾಗಿ ಬರೆಯಲ್ಪಟ್ಟಿರುವ ಸರಳ ಕಾವ್ಯ. ಬಾಲ ಸಹಜ ಭಾಷೆಯಲ್ಲಿ ಬರೆಯಲಾಗಿದೆ. ಪೆಡಸಾದ ಸರಣಿಯಿಲ್ಲ, ಮೊದಲಿಂದ ಕಡೆಯವರೆಗೂ ಪವಿತ್ರವಾದ ಗಾಯಿತ್ರಿ ಎಂದು ಕರೆಯಲ್ಪಡತಕ್ಕ ಅನುಷ್ಟುಪ್ ಛಂದಸ್ಸಿನಲ್ಲಿ ರಚಿಸಲ್ಪಟ್ಟಿದೆ. ಶ್ಲೋಕಗಳಲ್ಲಿನ ಪದಗಳ ಬಳಕೆಯು ನಾವು ಓದಿರತಕ್ಕ

ಹಲವು ಸ್ತೋತ್ರಗಳಿಗಿಂತ ವಿಭಿನ್ನವಾಗಿ ಹೊಸ ಹೊಸ ಪದಪರಿಚಯವಾಗುತ್ತದೆ. ಹಿರಿಯರೂ ಕೂಡ ಇದನ್ನು ಕಂಠಪಾಠಯೋಗ್ಯವೆಂಬುದಾಗಿ ಆಯ್ಕೆ ಮಾಡಿದ್ದಾರೆ. ಕಂಠಪಾಠ ಮಾಡುವಾಗ ಅರ್ಥವೂ ತಿಳಿದರೆ ಅಭ್ಯಾಸಿಗಳಿಗೆ ಹೆಚ್ಚು ಸಹಾಯಕವಾದೀತೆಂಬ ಉದ್ದೇಶದಿಂದ ಈ ಪುಸ್ತಕವನ್ನು ಈ ರೀತಿ ಸಿದ್ಧಗೊಳಿಸಲಾಗಿದೆ.

ಇನ್ನು ಪುಸ್ತಕದ ವಿಚಾರ : ಇದು ಸುಮಾರು ೨೦೦ ಶ್ಲೋಕಗಳಿಂದ ಕೂಡಿದೆ. ಶ್ರೀರಾಮೋದಂತವೆಂದರೆ ಶ್ರೀರಾಮನ ಚರಿತ್ರೆ ಎಂದು ಅರ್ಥ. ಇದು ಮಲಬಾರು ಅಥವಾ ಇಂದಿನ ಕೇರಳ ಪ್ರಾಂತ್ಯಕ್ಕೆ ಸೇರಿದ ಕವಿಯಿಂದ ರಚಿತವಾಗಿದೆ. ಆದ್ದರಿಂದಲೇ ಕೇರಳ ತಮಿಳುನಾಡಿನ ಸಂಸ್ಕೃತ ತಿಳಿದ ಜನರ ಮಧ್ಯೆ ಇದಕ್ಕೆ ಹೆಚ್ಚು ಪ್ರಚಾರವಿದೆ. ಇದರ ಕವಿಯ ಬಗ್ಗೆ ವಿವರಗಳು ಇನ್ನೂ ಸಿಕ್ಕಿಲ್ಲ. ಕೇವಲ ಊಹಾಪೋಹಗಳೇ ಇನ್ನೂ ನಡೆಯುತ್ತಿವೆ. ವಾರಿಯರ್ ಜಾತಿಗೆ ಸೇರಿದ ಸ್ತ್ರೀಯೊಬ್ಬಳಿಗೆ ದೈವದತ್ತವಾಗಿ ಉಂಟಾದ ಅದ್ಭುತ ಶಕ್ತಿಯ ಪರಿಣಾಮದಿಂದ ಈ ಗ್ರಂಥ ರಚಿತಗೊಂಡಿತೆಂಬ ದಂತ ಕಥೆಯೊಂದಿದೆ. ಸಿಕ್ಕಿದ ಮಾತೃಕೆಯಮೇಲೆ ನಾನೇರಿ ವಾಸುದೇವಶಾಸ್ತ್ರಿ ಎಂಬ ನಾಮನಿರ್ದೇಶನವಿದ್ದುದರಿಂದ ಅವರಿಂದ ರಚಿಸಲ್ಪಟ್ಟಿರಬೇಕೆಂಬ ಅಭಿಪ್ರಾಯ ಜರ್ಮನ್ ವಿದ್ವಾಂಸರದು. ಆದರೆ ಈ ನಾಮನಿರ್ದೇಶನವು ಮಾತೃಕೆಯ ಮಾಲಿಕತ್ವವನ್ನೋ ಲಿಪಿಕಾರತ್ವವನ್ನೋ ಸೂಚಿಸುವ ಸಾಧ್ಯತೆಯೂ ಇರುವುದರಿಂದ ಈ ವಾದವನ್ನು ತಳ್ಳಿ ಹಾಕುವವರೂ ಇದ್ದಾರೆ. ಈ ಪುಸ್ತಕದ ಹಲವು ವ್ಯಾಖ್ಯಾನಗಳಲ್ಲಿ ಒಂದರೊಳಗೆ ಸಿಕ್ಕುವ ನಿರ್ದೇಶದಂತೆ "ಅಥ ಪರಮೇಶ್ವರ ಪ್ರಸಾದ, ಸಮಸಾಧಿತ, ಸಕಲ ವಿದ್ಯಾತತ್ವ ವಿಭೂತಿ ಕವಿಕಾಲ ಪರಮೇಶ್ವರ । ಪರಮೇಶ್ವರನಾಮ ಕೇರಳೀಯ ಕವಿಃ ಶ್ರೀರಾಮೋದಂತ ಪ್ರಬಂಧಂ ಪ್ರಕ್ರಮಮಾನ........" ಇತ್ಯಾದಿಗೆ ಅನುಸಾರವಾಗಿ ಪರಮೇಶ್ವರನೆಂಬುವನು ಈ ರಾಮೋದಂತದ ಕರ್ತೃವೆಂದು ನಿರ್ಧರಿಸಲು ಸಾಧ್ಯವಾಗುತ್ತದೆ. ಆದರೆ "ಈ ಪರಮೇಶ್ವರನೆಂಬುವುದೂ ಕಾವ್ಯನಾಮ ; ಕವಿಯ ನಿಜವಾದ ಹೆಸರು ಪಯ್ಯೂರು ಭಟ್ಟಾದಿರಿ. ಇವನನ್ನು ರಿಷಿಪ್ಪ ಪರಮೇಶ್ವರನೆಂಬುದಾಗಿ ಕರೆಯುತ್ತಿದ್ದರು. ಈ ಹೆಸರು ಮಲೆಯಾಳ ಭಾಷೆಯ 'ಉನ್ನಿನಿಲಿ ಸಂದೇಶಂ' ಮುಂತಾದ ಕಾವ್ಯಗಳಲ್ಲಿ ಕಂಡುಬಂದಿದೆ" ಎಂಬುದಾಗಿ ಪಂಡಿತ ಇ. ವಿ. ರಾಮನ್ ನಂಬೂದಿರಿ ಎನ್ನುವ ಕೇರಳ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅಂತೂ ಈ ಎಲ್ಲಾ ವಿವಾದಗಳೂ ತೀರ್ಮಾನಗೊಳ್ಳುವವರೆಗೂ ಈ ಗ್ರಂಥವು ಪರಮೇಶ್ವರ ಕವಿ ಕೃತವಾದ್ದೆಂದು ನಾವು ತಿಳಿದರೆ ಯಾವ ಕುಂದೂ ಕಂಡುಬರುವುದಿಲ್ಲವೆಂದು ನನ್ನ ಅಭಿಪ್ರಾಯ

ಕನ್ನಡದ ಅರ್ಥ ತಾತ್ಪರ್ಯಗಳಿಂದ ಕನ್ನಡ ಲಿಪಿಯಲ್ಲಿ ಶ್ರೀರಾಮೋದಂತವನ್ನು ಪ್ರಕಟಿಸಬೇಕೆಂಬ ನನ್ನ ಅಪೇಕ್ಷೆ ಬಹಳ ದಿನಗಳದ್ದು. ಈಗ ಆ ಕಾಲವು ಕೈಗೂಡುತ್ತಿರುವುದೆಂದು ಭಾವಿಸುತ್ತೇನೆ. ಈ ಪುಸ್ತಕವನ್ನು ಸಿದ್ಧಪಡಿಸುವಾಗ ಕಾಡಿದ ಅನೇಕ ಸಮಸ್ಯೆಗಳು, ಅನೇಕ ಲೋಪದೋಷ ಸ್ಖಾಲಿತ್ಯಾದಿಗಳು ನನ್ನ ಆತ್ಮೀಯ ಗೆಳೆಯರೂ ಸಂಸ್ಕೃತ ಭಾಷಾಭಿಜ್ಞರೂ ದ್ವೈತ ವೇದಾಂತ ಅಲಂಕಾರ ಉಭಯ ವಿದ್ವಾಂಸರಾದ ವಾದಿರಾಜ ಅಗ್ನಿಹೋತ್ರಿಗಳ ನೆರವಿನಿಂದ ಸರಿಪಡಿಸಲ್ಪಟ್ಟು ಪ್ರಕೃತ ರೂಪದಿಂದ ಹೊರ ಬಂದಿದೆ. ಇವರ ಉಪಕಾರ ಮರೆಯಲಾಗದ್ದು. ಈ ಕಾರ್ಯದಲ್ಲಿ ಮೊದಲಿಂದ ಉತ್ಸಾಹ ತೋರಿಸಿ ನನ್ನಿಂದ ಈ ಪುಸ್ತಕ ಹೊರಬರುವಂತೆ ಮಾಡಿರುವ ಪ್ರೇರಕ ಶಕ್ತಿ ನನ್ನ ಮಾತೃಶ್ರೀಯವರು. ಈ ಪುಸ್ತಕ ಪ್ರಕಟನೆಗಾಗಿ ತಿರುಮಲೆ ತಿರುಪತಿ ದೇವಸ್ಥಾನದವರು ಉದಾರ ದ್ರವ್ಯ ಸಹಾಯ ನೀಡಿ ಪ್ರೋತ್ಸಾಹಿಸಿದ್ದಾರೆ. ಪುಸ್ತಕವನ್ನು ಅತ್ಯಲ್ಪಕಾಲದಲ್ಲಿಯೇ ಶ್ರಮವಹಿಸಿ ಅಂದವಾಗಿ ಮುದ್ರಿಸಿಕೊಟ್ಟವರು ಸುಬೋಧ ಪ್ರೆಸ್ಸಿನ ಶ್ರೀ ಗುರುರಾಜ ಎಂ. ಆರ್. ಈ ಎಲ್ಲರಿಗೂ ನನ್ನ ಹೃತ್ಪೂರ್ವಕ ನಮನಗಳು ಮತ್ತು ಕೃತಜ್ಞತೆಗಳು.

ಇತಿ

ಎಂ. ಆರ್. ನರಸಿಂಹನ್

॥ ಶ್ರೀ ॥

# ಶ್ರೀರಾಮೋದಂತಂ

## ಬಾಲಕಾಂಡಃ

### ಬಾಲಕಾಂಡ

**ಶ್ರೀಪತಿಂ ಪ್ರಣಿಪತ್ಯಾಹಂ ಶ್ರೀವತ್ಸಾಂಕಿತವಕ್ಷಸಂ ।**
**ಶ್ರೀರಾಮೋದಂತಮಾಖ್ಯಾಸ್ಯೇ ಶ್ರೀವಾಲ್ಮೀಕಿ ಪ್ರಕೀರ್ತಿತಂ ॥ ೧ ॥**

ಅಹಂ = ನಾನು, ಶ್ರೀವಕ್ಷಾಂಕಿತವಕ್ಷಸಂ = ಶ್ರೀವತ್ಸ ಚಿಹ್ನೆಯನ್ನುಳ್ಳ ಎದೆಯ, ಶ್ರೀಪತಿಂ = ಲಕ್ಷ್ಮೀಪತಿಯಾದ ಮಹಾವಿಷ್ಣುವನ್ನು, ಪ್ರಣಿಪತ್ಯ = ನಮಸ್ಕರಿಸಿ, ಶ್ರೀ ವಾಲ್ಮೀಕಿ ಪ್ರಕೀರ್ತಿತಂ = ಶ್ರೀ ವಾಲ್ಮೀಕಿ ಮಹರ್ಷಿಯಿಂದ ಹೇಳಲ್ಪಟ್ಟ, ಶ್ರೀ-ರಾಮೋದಂತಂ = ಶ್ರೀರಾಮನ ಚರಿತ್ರೆಯನ್ನು, ಆಖ್ಯಾಸ್ಯೇ = ಹೇಳುತ್ತೇನೆ.

ಶ್ರೀವತ್ಸ ಚಿಹ್ನೆಯಿಂದ ಕೂಡಿದ ಎದೆಯನ್ನು ಉಳ್ಳ ಲಕ್ಷ್ಮೀಪತಿಯಾದ ಮಹಾವಿಷ್ಣುವಿಗೆ ನಮಸ್ಕಾರ ಮಾಡಿ ಶ್ರೀಮದ್ವಾಲ್ಮೀಕಿ ಮಹರ್ಷಿಯಿಂದ ರಚಿಸಲ್ಪಟ್ಟ ಶ್ರೀರಾಮಚರಿತ್ರೆಯನ್ನು ಹೇಳುತ್ತೇನೆ.

**ಪುರಾ ವಿಶ್ರವಸಃ ಪುತ್ರೋ ರಾವಣೋನಾಮ ರಾಕ್ಷಸಃ ।**
**ಆಸೀದಸ್ಯಾನುಜೌ ಚಾಸ್ತಾಂ ಕುಂಭಕರ್ಣ ವಿಭೀಷಣೌ ॥ ೨ ॥**

ಪುರಾ = ಹಿಂದೆ, ವಿಶ್ರವಸಃ = ವಿಶ್ರವಸ್ ಎಂಬ ಋಷಿಗೆ, ರಾವಣಃ = ರಾವಣನೆಂಬ, ನಾಮ = ಹೆಸರುಳ್ಳ, ರಾಕ್ಷಸಃ = ರಾಕ್ಷಸನಾದ, ಪುತ್ರಃ = ಮಗನು, ಆಸೀತ್ = ಇದ್ದನು. ಅಸ್ಯ = ಇವನಿಗೆ, ಕುಂಭಕರ್ಣವಿಭೀಷಣೌ = ಕುಂಭಕರ್ಣ ಮತ್ತು ವಿಭೀಷಣರೆಂಬ, ಅನುಜೌ ಚ = ಇಬ್ಬರು ತಮ್ಮಂದಿರು ಕೂಡ, ಆಸ್ತಾಂ = ಇದ್ದರು.

ಹಿಂದೆ ವಿಶ್ರವಸ್ ಎಂಬ ಋಷಿಯಿದ್ದನು. ಅವನಿಗೆ ರಾವಣನೆಂಬ ಹೆಸರಿನ ರಾಕ್ಷಸ ಮಗನಿದ್ದನು. ಈ ರಾವಣನಿಗೆ ಕುಂಭಕರ್ಣ ಮತ್ತು ವಿಭೀಷಣರೆಂಬ ಇಬ್ಬರು ಸಹೋದರರಿದ್ದರು.

**ತೇತು ತೀವ್ರೇಣ ತಪಸಾ ಪ್ರತ್ಯಕ್ಷೇ ಕೃತ್ಯವೇಧಸಂ ।**
**ವವ್ರಿರೇಚ ವರಾನಿಷ್ಟಾನ್ ಅಸ್ಮಾದಾಶ್ರಿತ ವತ್ಸಲಾತ್ ॥ ೩ ॥**

ತೇತು = ಅವರಾದರೋ, ತೀವ್ರೇಣಃ = ಘೋರವಾದ, ತಪಸಾ = ತಪಸ್ಸಿನಿಂದ,

ವೇಧಸಂ = ಬ್ರಹ್ಮನನ್ನು, ಪ್ರತ್ಯಕ್ಷೀಕೃತ್ಯ = ಪ್ರತ್ಯಕ್ಷ ಮಾಡಿಕೊಂಡು, ಆಶ್ರಿತವತ್ಸ-ಲಾತ್ = ಆಶ್ರಿತರ ಮೇಲೆ ಕರುಣೆಯುಳ್ಳ, ಅಸ್ಮಾದ್ = ಇವನಿಂದ (ಬ್ರಹ್ಮನಿಂದ), ಇಷ್ಟಾನ್ = ಇಷ್ಟಪಟ್ಟ, ವರಾನ್ = ವರಗಳನ್ನು, ವವ್ರಿರೇ = ಕೇಳಿಕೊಂಡರು.

ಅವರಾದರೋ ಘೋರವಾದ ತಪಸ್ಸಿನ ಮೂಲಕ ಬ್ರಹ್ಮನನ್ನು ಪ್ರತ್ಯಕ್ಷ ಮಾಡಿಕೊಂಡು ಆಶ್ರಿತವತ್ಸಲನಾದ ಬ್ರಹ್ಮನಿಂದ ತಮಗೆ ಇಷ್ಟವಾದ ವರಗಳನ್ನು ಪಡೆದರು.

**ರಾವಣೋ ಮಾನುಷಾದನ್ಯೈಃ ಅವಧ್ಯತ್ವಂ ತಥಾಽನುಜಃ ।**
**ನಿರ್ದೇವತ್ವೇಚ್ಛಯಾ ನಿದ್ರಾಂ ಕುಂಭಕರ್ಣೋಽವೃಣೀತ ಚ ॥ ೪ ॥**

ರಾವಣಃ = ರಾವಣನು, ಮಾನುಷಾತ್ ಅನ್ಯೈಃ = ಮನುಷ್ಯನನ್ನು ಬಿಟ್ಟು ಬೇರೆಯವರಿಂದ, ಅವಧ್ಯತ್ವಂ = ಸಾಯದೇ ಇರುವಿಕೆಯನ್ನು, ಅವೃಣೀತ = ಕೇಳಿದನು. ತಥಾ = ಹಾಗೆಯೇ, ಅನುಜಃ = ತಮ್ಮನಾದ, ಕುಂಭಕರ್ಣಃ ಚ = ಕುಂಭಕರ್ಣನು ಸಹ, ನಿರ್ದೇವತ್ವ ಇಚ್ಛಯಾ = ದೇವತೆಗಳು ಇರಬಾರದೆಂಬ ಇಷ್ಟದಿಂದ, ನಿದ್ರಾಂ = ನಿದ್ರೆಯನ್ನು, ಅವೃಣೀತ = ಕೇಳಿದನು.

ರಾವಣನು ಮನುಷ್ಯರಲ್ಲದವರಿಂದ ಸಾಯದೇ ಇರುವಿಕೆಯನ್ನು ಬೇಡಿದನು. ಅವನ ಸೋದರ ಕುಂಭಕರ್ಣನೂ ಕೂಡ ದೇವತೆಗಳು ಇರಬಾರದೆಂಬ ವರವನ್ನು ಕೇಳಲು ಹೋಗಿ ತಪ್ಪಾಗಿ ನಿದ್ರೆಯನ್ನು ಬೇಡಿದನು (ನಿರ್ದೇವತ್ವಂ ಎನ್ನುವುದಕ್ಕೆ ಬದಲಾಗಿ ಅವಸರದಲ್ಲಿ ನಿದ್ರಾತ್ವಂ ಎಂಬುದನ್ನು ತಪ್ಪಾಗಿ ಬೇಡಿದನು ಎಂಬುದಾಗಿ ಇಲ್ಲಿ ಹೇಳಲಾಗಿದೆ).

**ವಿಭೀಷಣೋ ವಿಷ್ಣುಭಕ್ತಿಂ ವವ್ರೇ ಸತ್ವಗುಣಾನ್ವಿತಃ ।**
**ತೇಭ್ಯ ಏತಾನ್ ವರಾನ್ ದತ್ವಾ ತತ್ರೈವಾಂತರ್ದಧೇ ಪ್ರಭುಃ ॥ ೫ ॥**

ಸತ್ವಗುಣಾನ್ವಿತಃ = ಒಳ್ಳೆಯ ಗುಣಗಳಿಂದ ಕೂಡಿದ, ವಿಭೀಷಣಃ = ವಿಭೀಷಣನು, ವಿಷ್ಣುಭಕ್ತಿಂ = ವಿಷ್ಣುವಿನಲ್ಲಿ ಭಕ್ತಿಯನ್ನು, ವವ್ರೇ = ಕೇಳಿಕೊಂಡನು. ತೇಭ್ಯಃ = ಅವರುಗಳಿಗೆ, ಏತಾನ್ ವರಾನ್ = ಈ ವರಗಳನ್ನು, ದತ್ವಾ = ನೀಡಿ, ತತ್ರ ಏವ = ಅಲ್ಲಿಯೇ, ಪ್ರಭುಃ = ಸ್ವಾಮಿಯಾದ ಬ್ರಹ್ಮನು, ಅಂತರ್ದಧೇ = ಅದೃಶ್ಯನಾದನು.

ಗುಣವಂತನಾದ ವಿಭೀಷಣನು ವಿಷ್ಣುವಿನಲ್ಲಿ ಭಕ್ತಿಯನ್ನು ಬೇಡಿಕೊಂಡನು. ಅವರುಗಳಿಗೆ ಕೇಳಿದ ವರಗಳನ್ನು ನೀಡಿದ ಪ್ರಭುವಾದ ಬ್ರಹ್ಮನು ಅದೃಶ್ಯನಾದನು.

**ರಾವಣಸ್ತು ತತೋ ಗತ್ವಾ ರಣೇ ಜಿತ್ವಾ ಧನಾಧಿಪಂ ।**
**ಲಂಕಾಪುರೀಂ ಪುಷ್ಪಕಂ ಚ ಹೃತ್ವಾ ತತ್ರಾವಸತ್ ಸುಖಂ ॥ ೬ ॥**

ರಾವಣಃ ತು = ರಾವಣನಾದರೋ, ತತಃ = ಅನಂತರ, ಗತ್ವಾ = ಹೊರಟು, ರಣೇ = ಯುದ್ಧದಲ್ಲಿ, ಧನಾಧಿಪಂ = ಐಶ್ವರ್ಯಕ್ಕೆ ಯಜಮಾನನಾದ ಕುಬೇರನನ್ನು, ಜಿತ್ವಾ = ಜಯಿಸಿ, ಲಂಕಾಪುರೀಂ = ಲಂಕಾಪಟ್ಟಣವನ್ನು, ಪುಷ್ಪಕಂ ಚ = ಮತ್ತು ಪುಷ್ಪಕ ವಿಮಾನವನ್ನೂ, ಹೃತ್ವಾ = ಅಪಹರಿಸಿ, ತತ್ರ = ಅಲ್ಲಿ, ಸುಖಂ ಅವಸತ್ = ಸುಖವಾಗಿ ವಾಸಿಸಿದನು.

ರಾವಣನೋ ಹೊರಟು ಯುದ್ಧದಲ್ಲಿ ಐಶ್ವರ್ಯಾಧಿಪನಾದ ಕುಬೇರನನ್ನು ಜಯಿಸಿ ಅವನಿದ್ದ ಲಂಕಾಪಟ್ಟಣವನ್ನೂ ಮತ್ತು ಅವನ ವಿಮಾನವಾದ ಪುಷ್ಪಕವನ್ನೂ ಅಪಹರಿಸಿ ತಾನು ಅಲ್ಲಿಯೇ ಸುಖವಾಗಿ ವಾಸ ಮಾಡಿದನು.

**ಯಾತುಧಾನಾಸ್ತತಃ ಸರ್ವೇ ರಸಾತಲ ನಿವಾಸಿನಃ ।**
**ದಶಾನನಂ ಸಮಾಶ್ರಿತ್ಯ ಲಂಕಾಯಾಂ ಸುಖಮಾವಸನ್ ॥ ೭ ॥**

ತತಃ = ಅನಂತರ, ರಸಾತಲ ನಿವಾಸಿನಃ = ಪಾತಾಳದಲ್ಲಿ ವಾಸ ಮಾಡುತ್ತಿದ್ದ, ಸರ್ವೇ = ಎಲ್ಲಾ, ಯಾತುಧಾನಾಃ = ರಾಕ್ಷಸರೂ, ದಶಾನನಂ = ರಾವಣನನ್ನು, ಸಮಾಶ್ರಿತ್ಯ = ಆಶ್ರಯಿಸಿಕೊಂಡು, ಲಂಕಾಯಾಂ = ಲಂಕಾಪಟ್ಟಣದಲ್ಲಿ, ಸುಖಂ ಅವಸನ್ = ಸುಖವಾಗಿ ವಾಸ ಮಾಡಿದರು.

ಪಾತಾಳ ವಾಸಿಗಳಾಗಿದ್ದ ಎಲ್ಲಾ ರಾಕ್ಷಸರೂ ತರುವಾಯ ರಾವಣನನ್ನು ಆಶ್ರಯಿಸಿ ಲಂಕಾಪಟ್ಟಣದಲ್ಲಿ ಸುಖವಾಗಿ ವಾಸ ಮಾಡಲಾರಂಭಿಸಿದರು.

**ಮಂಡೋದರೀಂ ಮಯಸುತಾಂ ಪರಿಣೀಯ ದಶಾನನಃ ।**
**ತಸ್ಯಾಂ ಲೇಭೇ ಮಹಾವೀರಂ ಮೇಘನಾದಾಹ್ವಯಂ ಸುತಮ್ ॥ ೮ ॥**

ದಶಾನನಃ = ಹತ್ತು ಮುಖವುಳ್ಳ ರಾವಣನು, ಮಯ ಸುತಾಂ = ಮಯ ಎನ್ನುವ ರಾಕ್ಷಸನ ಮಗಳಾದ, ಮಂಡೋದರೀಂ = ಮಂಡೋದರಿ ಎನ್ನುವವಳನ್ನು, ಪರಿಣೀಯ = ಮದುವೆಯಾಗಿ, ತಸ್ಯಾಂ = ಅವಳಲ್ಲಿ, ಮೇಘನಾದಾಹ್ವಯಂ = ಮೇಘನಾದನೆಂಬ ಹೆಸರಿನ, ಮಹಾವೀರಂ = ಪರಾಕ್ರಮಶಾಲಿಯಾದ, ಸುತಂ = ಮಗನನು ಲೇಭೇ = ಪಡೆದನು.

ರಾವಣನು ಮಾಯಾಸುರನ ಮಗಳು ಮಂಡೋದರಿಯನ್ನು ಮದುವೆಯಾಗಿ ಆಕೆಯಿಂದ ಅತ್ಯಂತ ಪರಾಕ್ರಮಶಾಲಿಯಾದ ಮೇಘನಾದನೆಂಬುವ ಮಗನನ್ನು ಪಡೆದನು.

**ರಸಂ ರಸಾತಲಂ ಚೈವ ವಿಜಿತ್ಯ ಸ ತು ರಾವಣಃ ।**
**ಲೋಕಾನಾಕ್ರಮಯನ್ ಸರ್ವಾನ್ ಜಹಾರ ಚ ವಿಲಾಸಿನೀಃ ॥ ೯ ॥**

ಸಃ=ಆತನಾದರೋ (ರಾವಣ), ರಸಾಂ=ಭೂಮಿಯನ್ನು, ಚ=ಮತ್ತು, ರಸಾತಲಂ=ಪಾತಾಳವನ್ನೂ, ವಿಜಿತ್ಯ=ಜಯಿಸಿ, ಲೋಕಾನ್ =ಲೋಕಗಳನ್ನೆಲ್ಲಾ, ಆಕ್ರಮಯನ್=ಆಕ್ರಮಿಸುತ್ತ, ಸರ್ವಾಃ=ಎಲ್ಲಾ, ವಿಲಾಸಿನೀಃ ಚ=ಸ್ತ್ರೀಯರನ್ನೂ ಸಹ, ಜಹಾರ=ಅಪಹರಿಸಿದನು.

ರಾವಣನಾದರೋ ಭೂಮಿ ಮತ್ತು ಪಾತಾಳವನ್ನೂ ಜಯಿಸಿ ಎಲ್ಲಾ ಲೋಕಗಳನ್ನೂ ಆಕ್ರಮಿಸಿಕೊಂಡು ಸ್ತ್ರೀಯರನ್ನೂ ಕೂಡ ಅಪಹರಿಸಿದನು.

**ದೂಷಯಿನ್ ವೈದಿಕಂ ಕರ್ಮ ದ್ವಿಜಾನರ್ದಯಿತಿಸ್ಮ ಸಃ ।**
**ಆತ್ಮಜೇನ ತತೋಯುದ್ಧೇ ವಾಸವಂ ಚಾಪ್ಯ ಪೀಡಯತ್** ॥ ೧೦ ॥

ಸಃ=ಅವನು, ವೈದಿಕಂ ಕರ್ಮ=ವೇದವು ಸಾರುವ ಕರ್ಮಗಳನ್ನು, ದೂಷಯನ್=ಹಾಳುಮಾಡಿ, ದ್ವಿಜಾನ್=ಬ್ರಾಹ್ಮಣರನ್ನು, ಅರ್ದಯಿತಿಸ್ಮ=ಹಿಂಸಿಸುತ್ತಿದ್ದನು. ತತಃ=ನಂತರ, ಯುದ್ಧೇ=ಯುದ್ಧದಲ್ಲಿ, ವಾಸವಂ ಅಪಿ=ಇಂದ್ರನನ್ನೂ ಸಹ, ಆತ್ಮಜೇನ=ಮಗನಾದ ಮೇಘನಾದನ ಮೂಲಕ, ಅಪೀಡಯತ್=ಹಿಂಸಿಸಿದನು.

ಅವನು ವೇದವತ್ತಾದ ಕರ್ಮಗಳನ್ನೆಲ್ಲಾ ನಾಶ ಮಾಡಿ. ಬ್ರಾಹ್ಮಣರನ್ನು ಹಿಂಸಿಸುತ್ತಿದ್ದನು. ಮತ್ತು ಯುದ್ಧದಲ್ಲಿ ಇಂದ್ರನನ್ನೂ ಕೂಡ ತನ್ನ ಮಗ ಮೇಘನಾದನ ಮುಖಾಂತರ ಹಿಂಸಿಸಿದನು.

**ತದೀಯ ತರುರತ್ನಾನಿ ಪುನರಾನಾಯ್ಯ ಕಿಂಕರೈಃ ।**
**ಸ್ಥಾಪಯಿತ್ವಾ ತು ಲಂಕಾಯಾಂ ಅವಸಚ್ಚ ಚಿರಾಯುಸಃ** ॥ ೧೧ ॥

ಸ:=ಆ ರಾವಣನು, ಪುನಃ=ಮತ್ತೆ, ಕಿಂಕರೈಃ=ಸೇವಕರಿಂದ, ತದೀಯ=ಅವನ (ಇಂದ್ರನ), ತರುರತ್ನಾನಿ=ಕಲ್ಪವೃಕ್ಷ ಮತ್ತು ಚಿಂತಾಮಣಿ ಮುಂತಾದುವನ್ನು, ಆನಾಯ್ಯ=ತರಿಸಿ, ಲಂಕಾಯಾಂ=ಲಂಕಾಪಟ್ಟಣದಲ್ಲಿ, ಸ್ಥಾಪಯಿತ್ವಾ=ಸ್ಥಾಪಿಸಿ (ಇರಿಸಿ), ಚಿರಾಯು=ಬಹಳ ಕಾಲ, ಅವಸಚ್ಚ=ವಾಸ ಮಾಡಿದನು.

ಇದು ಮಾತ್ರವಲ್ಲದೆ ಆ ರಾವಣನು ಸೇವಕರ ಮೂಲಕ ಇಂದ್ರನ ಕಲ್ಪವೃಕ್ಷ ಮತ್ತು ಚಿಂತಾಮಣಿ ಮುಂತಾದ ವಸ್ತುಗಳನ್ನು ತರಿಸಿಕೊಂಡು ಲಂಕಾಪಟ್ಟಣದಲ್ಲಿ ಅವನ್ನು ಇರಿಸಿಕೊಂಡು ಬಹಳ ಕಾಲ ವಾಸ ಮಾಡುತ್ತಿದ್ದನು.

**ತತಃ ತಸ್ಮಿನ್ ಅವಸರೇ ವಿಧಾತಾರಂ ದಿವೌಕಸಃ ।**
**ಉಪಗಮ್ಯೋಚಿರೇ ಸರ್ವಂ ರಾವಣಸ್ಯ ವಿಚೇಷ್ಟಿತಂ** ॥ ೧೨ ॥

ತತಃ = ನಂತರ, ತಸ್ಮಿನ್ = ಆ, ಅವಸರೇ = ಸಮಯದಲ್ಲಿ, ದಿವೌಕಸಃ = ದೇವತೆಗಳು, ವಿಧಾತಾರಂ = ಬ್ರಹ್ಮನನ್ನು, ಉಪಗಮ್ಯ = ಸೇರಿದವರಾಗಿ, ರಾವಣಸ್ಯ = ರಾವಣನ, ಸರ್ವಂ = ಎಲ್ಲಾ, ವಿಚೇಷ್ಟಿತಂ = ಕೃತ್ಯಗಳನ್ನೂ, ಊಚಿರೇ = ಹೇಳಿದರು.

ಈ ಸಂದರ್ಭದಲ್ಲಿ ದೇವತೆಗಳು ಬ್ರಹ್ಮನ ಸಮೀಪವನ್ನು ಸೇರಿ ರಾವಣನ ಎಲ್ಲಾ ತೊಂದರೆಗಳನ್ನು ವಿವರಿಸಿದರು.

**ತದಾಕರ್ಣ್ಯ ಸುರೈಃ ಸಾಕಂ ಪ್ರಾಪ್ಯ ದುಗ್ಧೋದಧೇಸ್ತಟಮ್ ।**
**ತುಷ್ಟಾವ ಚ ಹೃಷೀಕೇಶಂ ವಿಧಾತಾ ವಿವಿಧೈಃ ಸ್ತವೈಃ ॥ ೧೩ ॥**

ವಿಧಾತಾ = ಬ್ರಹ್ಮನು, ತತ್ ಆಕರ್ಣ್ಯ = ಅದನ್ನು ಕೇಳಿ, ಸುರೈಃ = ದೇವತೆಗಳೊಡನೆ, ಸಾಕಂ = ಸೇರಿಕೊಂಡು, ದುಗ್ಧೋದಧೇ = ಕ್ಷೀರಸಮುದ್ರದ, ತಟಂ = ದಡವನ್ನು, ಪ್ರಾಪ್ಯ = ಸೇರಿ, ಹೃಷಿಕೇಶಂ = ವಿಷ್ಣುವನ್ನು, ವಿವಿಧೈಃ = ಬಹುವಿಧವಾದ, ಸ್ತವೈಃ = ಸ್ತೋತ್ರಗಳಿಂದ, ತುಷ್ಟಾವ = ಸಂತೋಷಪಡಿಸಿದನು.

ಬ್ರಹ್ಮನು ಅದನ್ನು ಕೇಳಿ ದೇವತೆಗಳನ್ನೊಳಗೊಂಡು ಕ್ಷೀರಸಮುದ್ರದ ದಡವನ್ನು ಸೇರಿ ವಿಷ್ಣುವನ್ನು ವಿವಿಧವಾದ ಸ್ತೋತ್ರಗಳಿಂದ ಸಂತೋಷಗೊಳಿಸಿದನು.

**ಆವಿರ್ಭೂಯಾಥ ದೈತ್ಯಾರಿಃ ಪಪ್ರಚ್ಛ ಚ ಪಿತಾಮಹಂ ।**
**"ಕಿಮರ್ಥ ಮಾಗತೋಽಸಿತ್ವಂ ಸಾಕಂ ದೇವಗಣೈ" ರಿತಿ ॥ ೧೪ ॥**

ಅಥ = ಅನಂತರ, ದೈತ್ಯಾರಿಃ ಚ = ರಾಕ್ಷಸರ ಶತ್ರುವಾದ ವಿಷ್ಣುವಾದರೋ, ಆವಿರ್ಭೂಯ = ಪ್ರತ್ಯಕ್ಷನಾಗಿ, ಕಿಮರ್ಥಂ = ಯಾವ ಉದ್ದೇಶದಿಂದ, ತ್ವಂ = ನೀನು, ದೇವಗಣೈಃ ಸಾಕಂ = ದೇವತೆಗಳ ಸಮೂಹದೊಂದಿಗೆ ಕೂಡಿ, ಆಗತೋಸಿ = ಬಂದಿದ್ದೀಯೆ, ಇತಿ = ಎಂಬುದಾಗಿ (ಹೀಗೆ), ಪಿತಾಮಹಂ = ಬ್ರಹ್ಮನನ್ನು, ಪಪ್ರಚ್ಛ = ಕೇಳಿದನು.

ಆಗ ರಾಕ್ಷಸರ ಶತ್ರುವಾದ ವಿಷ್ಣುವು ಪ್ರತ್ಯಕ್ಷನಾಗಿ ಬ್ರಹ್ಮನನ್ನು "ಯಾವ ಕಾರಣದಿಂದ ನೀನು ದೇವತೆಗಳ ಗುಂಪಿನೊಂದಿಗೆ ಬಂದಿದ್ದೀಯೆ" ಎಂಬುದಾಗಿ ಪ್ರಶ್ನಿಸಿದನು.

**ತತೋ ದಶಾನನಾತ್ ಪೀಡಾಮಜಸ್ತಸ್ಮೈ ನ್ಯವೇದಯತ್ ।**
**ತಚ್ಛ್ರುತ್ವೋವಾಚ ಧಾತಾರಂ ಹರ್ಷಯನ್ ವಿಷ್ಟರಶ್ರವಾಃ ॥ ೧೫ ॥**

ತತಃ = ನಂತರ, ಅಜಃ = ಬ್ರಹ್ಮನು, ದಶಾನನಾತ್ = ರಾವಣನ ದೆಸೆಯಿಂದ (ಉಂಟಾದ), ಪೀಡಾಂ = ಉಪದ್ರವಗಳನ್ನು, ತಸ್ಮೈ = ಅವನಿಗೆ, ನ್ಯವೇದಯನ್ =

ಹೇಳಿದನು. ವಿಷ್ಟರಶ್ರವಾಃ = ವಿಷ್ಣುವು, ತತ್ ಶ್ರುತ್ವಾ = ಅದನ್ನು ಕೇಳಿ, ಧಾತಾರಂ = ಬ್ರಹ್ಮನನ್ನು ಕುರಿತು, ಹರ್ಷಯನ್ = ಸಂತೋಷವಾಗುವಂತೆ, ಉವಾಚ = ಹೇಳಿದನು.

ಅನಂತರ ಬ್ರಹ್ಮನು ರಾವಣನಿಂದ ಉಂಟಾಗುತ್ತಿದ್ದ ಉಪದ್ರವಗಳನ್ನೆಲ್ಲಾ ವಿಷ್ಣುವಿಗೆ ತಿಳಿಸಿದನು. ವಿಷ್ಣುವು ಅವನ್ನೆಲ್ಲಾ ಆಲಿಸಿ ಬ್ರಹ್ಮನಿಗೆ ಸಂತೋಷವಾಗುವಂತೆ ಹೇಳಿದನು.

**"ಅಲಂ ಭಯೇನಾತ್ಮಯೋನೇ ! ಗಚ್ಛದೇವಗಣೈಃ ಸಹ ।**
**ಅಹಂ ದಾಶರಥಿರ್ಭೂತ್ವಾ ಹನಿಷ್ಯಾಮಿ ದಶಾನನಂ ॥ ೧೬ ॥**

ಆತ್ಮಯೋನೇ = ಎಲೈ ಬ್ರಹ್ಮನೇ ! ಅಲಂ ಭಯೇನ = ಭಯವನ್ನು ಬಿಡು, ದೇವಗಣೈಃ ಸಹ = ದೇವತೆಗಳ ಗುಂಪಿನೊಂದಿಗೆ, ಗಚ್ಛ = ಹೋಗುವಂತಹವನಾಗು, ಅಹಂ = ನಾನು, ದಾಶರಥಿಃ = ದಶರಥನಿಗೆ ಮಗನಾಗಿ, ಭೂತ್ವಾ = ಹುಟ್ಟಿ, ದಶಾನನಂ = ರಾವಣನನ್ನು, ಹನಿಷ್ಯಾಮಿ = ಕೊಲ್ಲುತ್ತೇನೆ.

"ಎಲೈ ಬ್ರಹ್ಮನೇ ! ಭಯವನ್ನು ಬಿಟ್ಟು ದೇವತೆಗಳ ಜೊತೆ ಹಿಂತಿರುಗು ನಾನು ದಶರಥನ ಮಗನಾಗಿ ಜನಿಸಿ ರಾವಣನನ್ನು ಸಂಹಾರ ಮಾಡುತ್ತೇನೆ".

**"ಆತ್ಮಾಂಶೈಶ್ಚ ಸುರಾಃ ಸರ್ವೇ ಭೂವೌ ವಾನರ ರೂಪಿಣಃ ।**
**ಜಾಯೇರನ್ ಮಮ ಸಾಹಾಯ್ಯಂ ಕರ್ತುಂ ರಾವಣ ನಿಗ್ರಹೇ ॥ ೧೭ ॥**

ಸರ್ವೇ = ಎಲ್ಲಾ, ಸುರಾಃ ಚ = ದೇವತೆಗಳೂ ಸಹ, ಆತ್ಮಾಂಶೈಃ = ತಮ್ಮ ತಮ್ಮ ಅಂಶಗಳೊಂದಿಗೆ, ವಾನರ ರೂಪಿಣಃ = ವಾನರ ರೂಪದೊಂದಿಗೆ, ರಾವಣ ನಿಗ್ರಹೇ = ರಾವಣನನ್ನು ನಿಗ್ರಹಿಸುವ ಕಾರ್ಯದಲ್ಲಿ, ಮಮ = ನನಗೆ, ಸಾಹಾಯ್ಯಂ = ಸಹಾಯವನ್ನು, ಕರ್ತುಂ = ಮಾಡಲು, ಭೂವೌ = ಭೂಮಿಯಲ್ಲಿ, ಜಾಯೇರನ್ = ಹುಟ್ಟುವವರಾಗಲಿ.

"ಎಲ್ಲಾ ದೇವತೆಗಳೂ ಕೂಡ ತಮ್ಮ ತಮ್ಮ ಅಂಶಗಳೊಡನೆ, ರಾವಣನನ್ನು ನಿಗ್ರಹಿಸುವ ಕಾರ್ಯದಲ್ಲಿ ನನಗೆ ಸಹಾಯ ಮಾಡಲು ಭೂಮಿಯಲ್ಲಿ ವಾನರರಾಗಿ ಹುಟ್ಟಲಿ".

**ಏವಮುಕ್ತ್ವಾ ವಿಧಾತಾರಂ ತತ್ರೈವಾಂತರ್ದಧೇ ಪ್ರಭುಃ ।**
**ಪದ್ಮಯೋನಿಸ್ತು ಗೀರ್ವಾಣೈಃ ಸಮಂ ಪ್ರಾಯಾತ್ ಪ್ರಹೃಷ್ಟಧೀಃ ॥ ೧೮ ॥**

ಏವಂ = ಹೀಗೆ, ವಿಧಾತಾರಂ = ಬ್ರಹ್ಮನನ್ನು ಕುರಿತು, ಉಕ್ತ್ವಾ = ಹೇಳಿ, ತತ್ರ ಏವ = ಅಲ್ಲಿಯೇ, ಪ್ರಭುಃ = ವಿಷ್ಣುವು, ಅಂತರ್ದಧೇ = ಅಂತರ್ಧಾನನಾದನು.

ಪದ್ಮಯೋನಿಸ್ತು = ಬ್ರಹ್ಮನಾದರೊ, ಪ್ರಹೃಷ್ಟ ಧೀಃ = ಸಂತೋಷದ ಮನಸ್ಸಿನಿಂದ, ಗೀರ್ವಾಣೈಃ ಸಮಂ = ದೇವತೆಗಳ ಜೊತೆ, ಪ್ರಾಯಾತ್ = ಹೋದನು.

ಹೀಗೆ ಬ್ರಹ್ಮನನ್ನು ಕುರಿತು ವಿವರಿಸಿದ ವಿಷ್ಣುವು ಅಂತರ್ಧಾನಗೊಳ್ಳಲು ಬ್ರಹ್ಮನು ಸಂತೋಷಮನಸ್ಕನಾಗಿ ದೇವತೆಗಳ ಜೊತೆ ಹಿಂತಿರುಗಿದನು.

**ಅಜೀಜನತ್ ತತಃ ಶಕ್ರಃ ವಾಲಿನಂ ನಾಮ ವಾನರಂ ।**
**ಸುಗ್ರೀವಮಪಿ ಮಾರ್ತಾಂಡಃ ಹನುಮಂತಂ ಚ ಮಾರುತಃ ॥ ೧೯ ॥**

ತತಃ = ನಂತರ, ಶಕ್ರಃ = ಇಂದ್ರನು, ವಾಲಿನಂ ನಾಮ = ವಾಲಿಯೆಂಬ ಹೆಸರಿನ, ವಾನರಂ = ಕಪಿಯನ್ನು, ಅಜೀಜನತ್ ಹುಟ್ಟಿಸಿದನು. ಮಾರ್ತಾಂಡಃ ಅಪಿ = ಸೂರ್ಯನೂ ಸಹ, ಸುಗ್ರೀವಂ = ಸುಗ್ರೀವನನ್ನು, (ಅಜೀಜನತ್ = ಹುಟ್ಟಿಸಿದನು). ಮಾರುತಃ = ವಾಯುವು, ಹನುಮಂತಂ = ಆಂಜನೇಯನನ್ನು, (ಅಜೀಜನತ್ = ಹುಟ್ಟಿಸಿದನು).

ನಂತರ ಇಂದ್ರನು ವಾಲಿ ಎನ್ನುವ ವಾನರನನ್ನೂ, ಸೂರ್ಯನು ಸುಗ್ರೀವ ಮತ್ತು ವಾಯುವು ಹನುಮಂತನನ್ನೂ ಹುಟ್ಟಿಸಿದರು (ಸೃಷ್ಟಿಸಿದರು). (ಇಲ್ಲಿ ಅಜೀಜನತ್ ಎಂಬ ಪದ ಮೂರು ಕಡೆ ಬಳಸಿಕೊಳ್ಳಬೇಕಾಗುತ್ತದೆ).

**ಪುರೈವ ಜನಯಾಮಾಸ ಜಾಂಬವಂತಂ ಚ ಪದ್ಮಜಃ ।**
**ಏವಮನ್ಯೇ ಚ ವಿಬುಧಾಃ ಕಪೀನಜನಯನ್ ಬಹೂನ್ ॥ ೨೦ ॥**

ಪುರಾ ಏವ = ಇದಕ್ಕೆ ಹಿಂದೆಯೇ, ಪದ್ಮಜಃ ಚ = ಬ್ರಹ್ಮನಾದರೋ, ಜಾಂಬವಂತಂ = ಜಾಂಬವಂತನನ್ನು, ಜನಯಾಮಾಸ = ಹುಟ್ಟಿಸಿದ್ದನು. ಏವಂ ಅನ್ಯೈಃ = ಹೀಗೆಯೇ ಬೇರೆ, ವಿಬುಧಾಃ ಚ = ದೇವತೆಗಳೂ ಕೂಡ, ಬಹೂನ್ = ಅನೇಕ, ಕಪೀನ್ = ಕಪಿಗಳನ್ನು, ಅಜನಯನ್ = ಹುಟ್ಟಿಸಿದ್ದರು.

ಇದಕ್ಕೆ ಮುಂಚೆಯೇ ಬ್ರಹ್ಮನಾದರೋ ಜಾಂಬವಂತನನ್ನು ಹುಟ್ಟಿಸಿದ್ದನು. ಇದೇ ರೀತಿ ಬೇರೆ ದೇವತೆಗಳೂ ಕೂಡ ಅನೇಕ ಕಪಿಗಳನ್ನು ಹುಟ್ಟಿಸಿದ್ದರು.

**ತತೋ ವಾನರ ಸಂಘಾನಾಂ ವಾಲೀ ಪರಿವೃಢೋಽಭವತ್ ।**
**ಅಮೀಭಿರಖಿಲೈಃ ಸಾಕಂ ಕಿಷ್ಕಿಂಧಾಮಧ್ಯುವಾಸ ಚ ॥ ೨೧ ॥**

ತತಃ = ನಂತರದಲ್ಲಿ, ವಾಲೀ = ವಾಲಿ ಎಂಬ ವಾನರನು, ವಾನರ ಸಂಘಾನಾಂ ವಾನರರ ಸಮೂಹಕ್ಕೆ, ಪರಿವೃಢಃ = ಮುಖ್ಯಸ್ಥನು, ಅಭವತ್ = ಆದನು. ಸಃ = ಅವನು, ಅಮೀಭಿಃ = ಈ, ಅಖಿಲೈಃ = ಎಲ್ಲಾ ವಾನರರ, ಸಾಕಂ = ಜೊತೆಯಲ್ಲಿ, ಕಿಷ್ಕಿಂಧಾಂ = ಕಿಷ್ಕಿಂಧಾ ನಗರದಲ್ಲಿ, ಅಧ್ಯುವಾಸ ಚ = ವಾಸ ಮಾಡಿದನು.

ನಂತರ ವಾಲಿ ಎಂಬ ವಾನರನು ಆ ಕಪಿ ಸಮೂಹಕ್ಕೆ ಮುಖ್ಯಸ್ಥನಾಗಿ ಆ ಕಪಿಗಳ ಸಂಗಡ ಕಿಷ್ಕಿಂಧೆಯಲ್ಲಿ ವಾಸವಾಗಿದ್ದನು.

**ಆಸೀದ್ ದಶರಥೋ ನಾಮ ಸೂರ್ಯವಂಶೇಥ ಪಾರ್ಥಿವಃ ।**
**ಭಾರ್ಯಾಸ್ತಿಸ್ರೋಽಪಿ ಲಬ್ಧ್ವಾಽಸೌ ತಾಸು ಲೇಭೇ ನ ಸಂತತೀಮ್ ॥ ೨೨ ॥**

ಅಥ=ಅನಂತರ, ಸೂರ್ಯವಂಶೇ=ಸೂರ್ಯವಂಶದಲ್ಲಿ, ದಶರಥಃ ನಾಮ=ದಶರಥನೆಂಬ ಹೆಸರಿನ, ಪಾರ್ಥಿವಃ=ಕ್ಷತ್ರಿಯನು, ಆಸೀತ್=ಇದ್ದನು, ಅಸೌ=ಇವನು, ತಿಸ್ರಃ ಭಾರ್ಯಾಃ=ಮೂವರು ಹೆಂಡತಿಯರನ್ನು, ಲಬ್ಧ್ವಾ ಅಪಿ=ಹೊಂದಿದ್ದರೂ ಸಹ, ತಾಸು=ಅವರಲ್ಲಿ, ಸಂತತಿಂ=ಸಂತಾನವನ್ನು, ನ ಲೇಭೇ=ಹೊಂದಲಿಲ್ಲ.

ಸೂರ್ಯವಂಶದಲ್ಲಿ ದಶರಥನೆಂಬ ಹೆಸರಿನ ಕ್ಷತ್ರಿಯನಿದ್ದನು. ಈತನಿಗೆ ಮೂವರು ಹೆಂಡತಿಯರಿದ್ದರೂ ಅವರಲ್ಲಿ ಸಂತಾನವನ್ನು ಹೊಂದಿರಲಿಲ್ಲ.

**ತತಃ ಸುಮಂತ್ರ ವಚನಾತ್ ಋಷ್ಯಶೃಂಗಂ ಸ ಭೂಪತಿಃ ।**
**ಆನೀಯ ಪುತ್ರಕಾಮೇಷ್ಟಿಂ ಆರೇಭೇ ಸ ಪುರೋಹಿತಃ ॥ ೨೩ ॥**

ತತಃ = ಅನಂತರ, ಸಃ = ಆ, ಭೂಪತಿಃ=ರಾಜನು, ಸುಮಂತ್ರವಚನಾತ್=ಮಂತ್ರಿಯಾದ ಸುಮಂತ್ರನ ಮಾತಿನಿಂದ, ಋಷ್ಯಶೃಂಗಂ=ಋಷ್ಯಶೃಂಗನೆಂಬ ಋಷಿಯನ್ನು, ಆನೀಯ=ಕರೆತಂದು, ಸಪುರೋಹಿತಃ=ಪುರೋಹಿತರಿಂದ ಕೂಡಿ, ಪುತ್ರಕಾಮೇಷ್ಟಿಂ=ಪುತ್ರಕಾಮವೆಂಬ ಯಜ್ಞವನ್ನು, ಆರೇಭೇ=ಆರಂಭಿಸಿದನು.

ಆ ರಾಜನು ಸುಮಂತ್ರನ ಮಾತಿನಿಂದ ಋಷ್ಯಶೃಂಗನೆಂಬ ಮುನಿಯನ್ನು ಕರೆಸಿ ಪುರೋಹಿತರಿಂದ ಕೂಡಿ ಪುತ್ರಕಾಮೇಷ್ಟಿಯನ್ನು ಆರಂಭಿಸಿದನು.

**ಅಥಾಗ್ನೇರುತ್ಥಿತಃ ಕಶ್ಚಿತ್ ಗೃಹೀತ್ವಾ ಪಾಯಸಂ ಚರುಮ್ ।**
**"ಏತತ್ ಪ್ರಾಶಯ ಪತ್ನೀಸ್ತ್ವಂ" ಇತ್ಯುಕ್ತ್ವಾಽದಾತ್ ನೃಪಾಯ ಸಃ ॥ ೨೪ ॥**

ಅಥಃ=ನಂತರ, ಪಾಯಸಂ=ಪಾಯಸದಿಂದ ಕೂಡಿದ, ಚರುಂ=ಪ್ರಸಾದವನ್ನು, ಗೃಹೀತ್ವಾ=ಹಿಡಿದುಕೊಂಡು, ಕಶ್ಚಿತ್=ಒಬ್ಬನು, ಅಗ್ನೇಃ=ಅಗ್ನಿಯಿಂದ, ಉತ್ಥಿತಃ=ಎದ್ದನು ಸಃ=ಅವನು, ಏತತ್=ಈ ಪ್ರಸಾದವನ್ನು, ತ್ವಂ=ನೀನು, ಪತ್ನೀಃ=ಪತ್ನಿಯರಿಗೆ, ಪ್ರಾಶಯ=ಕುಡಿಸು, ಇತಿ=ಹೀಗೆ, ಉಕ್ತ್ವಾ=ಹೇಳಿ, ನೃಪಾಯ=ರಾಜನಿಗೆ, ಅದಾತ್=ಕೊಟ್ಟನು.

ಆಗ ಪಾಯಸದಿಂದ ಒಡಗೊಂಡ ಚರುವನ್ನು ಅಗ್ನಿಯಿಂದ ಮೇಲೆದ್ದು ಬಂದ

ಒಬ್ಬನು ಹಿಡಿದುಕೊಂಡು "ಈ ಪ್ರಸಾದವನ್ನು ನೀನು ನಿನ್ನ ಹೆಂಡತಿಯರಿಗೆ ಕುಡಿಸು" ಎಂದು ಹೇಳಿ ರಾಜನಿಗೆ ನೀಡಿದನು.

**ತದ್ ಗೃಹೀತ್ವಾ ತದೈವಾಸೌ ಪತ್ನೀಃ ಪ್ರಾಶಯದುತ್ಸುಕಃ ।**
**ತಾಶ್ಚ ತತ್ಪ್ರಾಶನಾದೇವ ಸಾಧ್ವ್ಯಃ ಗರ್ಭಮಧಾರಯನ್ ॥ ೨೫ ॥**

ಅಸೌ=ಆ ದಶರಥನು, ತತ್=ಅದನ್ನು, ಗೃಹೀತ್ವಾ=ತೆಗೆದುಕೊಂಡು, ಉತ್ಸುಕಃ=ಆಸೆಯೊಡನೆ, ತದಾ ಏವ=ಆಗಲೇ, ಪತ್ನೀಃ=ಹೆಂಡತಿಯರಿಗೆ, ಪ್ರಾಶಯತ್=ಕುಡಿಸಿದನು, ತಾಃ ಸಾಧ್ವ್ಯಃ ಚ=ಆ ಪತಿವ್ರತೆಯರಾದರೋ, ತತ್ಪ್ರಾಶನಾದೇವ=ಆ ಪ್ರಸಾದ ಸ್ವೀಕಾರದಿಂದಲೇ, ಗರ್ಭಂ=ಗರ್ಭವನ್ನು, ಅಧಾರಯನ್=ಹೊಂದಿದರು.

ದಶರಥನು ಅದನ್ನು ತೆಗೆದುಕೊಂಡು ಆಸೆಯೊಡನೆ ಆಗಲೇ ಹೋಗಿ ಪತ್ನಿಯರಿಗೆ ಕುಡಿಸಿದನು. ಆ ಪತಿವ್ರತೆಯರು ಪ್ರಸಾದ ಸ್ವೀಕಾರಮಾಡಿದೊಡನೆಯೇ ಗರ್ಭವನ್ನು ಧರಿಸಿದರು.

**ಪೂರ್ಣಕಾಲೇಽಥ ಕೌಸಲ್ಯಾ ಸಜ್ಜನಾಂಭೋಜ ಭಾಸ್ಕರಂ ।**
**ಅಜೀಜನತ್ ರಾಮಚಂದ್ರಂ ಕೈಕೇಯೀ ಭರತಂ ತದಾ ॥ ೨೬ ॥**

ಅಥ=ಅನಂತರ, ಕಾಲೇ=ಕಾಲವು, ಪೂರ್ಣೇ ಸತಿ=ತುಂಬುತ್ತಿರಲು, ಕೌಸಲ್ಯಾ=ಕೌಸಲ್ಯೆಯು, ಸಜ್ಜನ ಅಂಭೋಜ ಭಾಸ್ಕರಂ=ಸಜ್ಜನರೆಂಬ ಕಮಲಗಳಿಗೆ ಸೂರ್ಯನಂತಿರುವ, ರಾಮಚಂದ್ರಂ=ರಾಮಚಂದ್ರನೆಂಬ ಮಗನನ್ನು, ಅಜೀ-ಜನತ್=ಪ್ರಸವಿಸಿದಳು, ತದಾ=ಅದೇರೀತಿ, ಕೈಕೇಯೀಂ=ಕೈಕೇಯಿಯು, ಭರತಂ=ಭರತನನ್ನು, ಅಜೀಜನತ್=ಪ್ರಸವಿಸಿದಳು.

ಕಾಲವು ತುಂಬುತ್ತಿರಲಾಗಿ ಕೌಸಲ್ಯೆಯು ಸಜ್ಜನರೆಂಬ ಕಮಲಗಳಿಗೆ ಸೂರ್ಯನೋಪಾದಿ ಕಂಗೊಳಿಸುತ್ತಿದ್ದ ರಾಮಚಂದ್ರನನ್ನು ಪ್ರಸವಿಸಿದಳು. ಅದೇ ರೀತಿ ಕೈಕೆಯಿಯು ಭರತನಿಗೆ ಜನ್ಮವಿತ್ತಳು.

**ತತೋ ಲಕ್ಷ್ಮಣ ಶತ್ರುಘ್ನೌ ಸುಮಿತ್ರಾಽಜೀಜನತ್ ಸುತೌ ।**
**ಅಕಾರಯತ್ ಪಿತಾ ತೇಷಾಂ ಜಾತಕರ್ಮಾಧಿಕಂ ದ್ವಿಜೈಃ ॥ ೨೭ ॥**

ತತಃ=ನಂತರ, ಸುಮಿತ್ರಾ=ಸುಮಿತ್ರೆಯು, ಲಕ್ಷ್ಮಣ ಶತ್ರುಘ್ನೌ=ಲಕ್ಷ್ಮಣ ಶತ್ರುಘ್ನರೆಂಬುವ, ಸುತೌ=ಪುತ್ರರಿಬ್ಬರನ್ನು, ಅಜೀಜನತ್=ಹಡೆದಳು. ಪಿತಾ=ತಂದೆಯು, ದ್ವಿಜೈಃ=ಬ್ರಾಹ್ಮಣರಿಂದ, ತೇಷಾಂ=ಅವರುಗಳ, ಜಾತಕರ್ಮಾಧಿಕಂ=ಜಾತಕರ್ಮಾದಿಗಳನ್ನು, ಅಕಾರಯತ್=ಮಾಡಿದನು.

ಸುಮಿತ್ರೆಯು ಲಕ್ಷ್ಮಣ ಶತ್ರುಘ್ನರೆಂಬ ಮಕ್ಕಳಿಬ್ಬರನ್ನು ಪ್ರಸವಿಸಿದಳು. ತಂದೆಯು ಬ್ರಾಹ್ಮಣರಿಂದ ಅವರ ಜಾತಕರ್ಮಾದಿಗಳನ್ನು ನೆರವೇರಿಸಿದನು.

**ತತೋ ವವೃಧಿರೇಽನ್ಯೋಽನ್ಯಂ ಸ್ನಿಗ್ಧಾಶ್ಚತ್ವಾರ ಏವತೇ ।**
**ಸಕಲಾಸು ಚ ವಿದ್ಯಾಸು ನೈಪುಣ್ಯಮಭಿಲೇಭಿರೇ ॥ ೨೮ ॥**

ತತಃ = ನಂತರ, ತೇ = ಆ, ಚತ್ವಾರಃ = ನಾಲ್ವರೂ, ಅನ್ಯೋನ್ಯಂ = ಅನ್ಯೋನ್ಯವಾಗಿ, ಸ್ನಿಗ್ಧಾ ಏವ = ಸ್ನೇಹದಿಂದಲೇ, ವವೃಧಿರೆ = ಬೆಳೆದರು, ಸಕಲಾಸು = ಎಲ್ಲಾ, ವಿದ್ಯಾ ಸು ಚ = ವಿದ್ಯೆಗಳಲ್ಲೂ ಕೂಡ, ನೈಪುಣ್ಯಂ = ನಿಪುಣತೆಯನ್ನು, ಅಭಿಲೇಭಿರೇ = ಹೊಂದಿದರು.

ಆ ನಾಲ್ವರೂ ಅನ್ಯೋನ್ಯವಾಗಿ ಸ್ನೇಹದಿಂದ ಬೆಳೆದರು. ಎಲ್ಲಾ ವಿದ್ಯೆಗಳಲ್ಲೂ ಸಹ ನಿಪುಣತೆಯನ್ನು ಪಡೆದರು.

**ತತಃ ಕದಾಚಿದಾಗತ್ಯ ವಿಶ್ವಾಮಿತ್ರೋ ಮಹಾಮುನಿಃ ।**
**ಯಯಾಚೇ ಯಜ್ಞರಕ್ಷಾರ್ಥಂ ರಾಮಂ ಶಕ್ತಿಧರೋಪಮಂ ॥ ೨೯ ॥**

ತತಃ = ನಂತರ, ಕದಾಚಿತ್ = ಒಮ್ಮೆ, ಮಹಾಮುನಿಃ = ಮಹಾ ತಪಸ್ವಿಯಾದ, ವಿಶ್ವಾಮಿತ್ರಃ = ವಿಶ್ವಾಮಿತ್ರರು, ಆಗತ್ಯ = ಬಂದು, ಶಕ್ತಿಧರೋಪಮಮ್ = ಶಕ್ತ್ಯಾಯುಧವನ್ನು ಧರಿಸಿದ ಸುಬ್ರಹ್ಮಣ್ಯನಂತಿರುವ, ರಾಮಮ್ = ರಾಮನನ್ನು, ಯಜ್ಞರಕ್ಷಾರ್ಥಂ = ಯಜ್ಞ ರಕ್ಷಣೆಗಾಗಿ, ಯಯಾಚ = ಕೇಳಿದನು.

ಒಂದು ದಿನ ಮಹಾ ತಪಸ್ವಿಗಳಾದ ವಿಶ್ವಾಮಿತ್ರರು ಬಂದು ಶಕ್ತ್ಯಾಯುಧವನ್ನು ಧರಿಸಿದ ಸುಬ್ರಹ್ಮಣ್ಯನಂತಿದ್ದ ರಾಮನನ್ನು ತಾನು ಮಾಡಲು ಉಪಕ್ರಮಿಸಿರುವ ಯಜ್ಞದ ರಕ್ಷಣಾರ್ಥವಾಗಿ ದಶರಥನಲ್ಲಿ ಬೇಡಿದರು.

**ವಸಿಷ್ಠ ವಚನಾದ್ರಾಮಂ ಲಕ್ಷ್ಮಣೇನ ಸಮನ್ವಿತಂ ।**
**ಕೃಚ್ಛ್ರೇಣ ನೃಪತಿಸ್ತಸ್ಯ ಕೌಶಿಕಸ್ಯ ಕರೇದದೌ ॥ ೩೦ ॥**

ನೃಪತಿಃ = ರಾಜನು, ವಸಿಷ್ಠ ವಚನಾತ್ = ವಸಿಷ್ಠರ ಮಾತಿನಂತೆ, ಲಕ್ಷ್ಮಣೇನ = ಲಕ್ಷ್ಮಣನಿಂದ, ಸಮನ್ವಿತಂ = ಜೊತೆಗೂಡಿಸಲ್ಪಟ್ಟ, ರಾಮಂ = ರಾಮನನ್ನು ತಸ್ಯ = ಆ, ಕೌಶಿಕಸ್ಯ = ವಿಶ್ವಾಮಿತ್ರರ, ಕರೇ = ಕೈಯಲ್ಲಿ, ಕೃಚ್ಛ್ರೇಣ = ಮನಸ್ಸಿನ ದುಗುಡದಿಂದ, ದದೌ = ಒಪ್ಪಿಸಿದನು.

ರಾಜನು ವಸಿಷ್ಠರ ಮಾತಿನಂತೆ ಲಕ್ಷ್ಮಣನಿಂದ ಒಡಗೂಡಿದ ರಾಮನನ್ನು ಆ ವಿಶ್ವಾಮಿತ್ರರ ಕೈಯ್ಯಲ್ಲಿ ಮನಃಕ್ಲೇಶದೊಡನೆ ಒಪ್ಪಿಸಿದನು.

**ತೌ ಗೃಹೀತ್ವಾ ತತೋ ಗಚ್ಛನ್ ಬಲಾಮತಿಬಲಾಂ ತಥಾ ।**
**ಅಸ್ತ್ರಾಣಿ ಚ ಸಮಗ್ರಾಣಿ ತಾಭ್ಯಾಮುಪದಿದೇಶ ಸಃ ॥ ೩೦ ॥**

ತತಃ = ಅನಂತರ, ತೌ = ಅವರಿಬ್ಬರನ್ನೂ, ಗೃಹೀತ್ವಾ = ಕರೆದುಕೊಂಡು, ಗಚ್ಛನ್ = ಹೋಗುತ್ತಾ, ಸಃ = ಆ ವಿಶ್ವಾಮಿತ್ರಮಹರ್ಷಿಯು, ಬಲಾಮತಿಬಲಾಂ = ಬಲ ಮತ್ತು ಅತಿಬಲ ಎನ್ನುವ ವಿದ್ಯೆಯ ಮಂತ್ರಗಳನ್ನು, ತಥಾ = ಹಾಗೆಯೇ, ಸಮಗ್ರಾಣಿ = ಜೃಂಭಕಾದಿ ಎಲ್ಲಾ, ಅಸ್ತ್ರಾಣಿ ಚ = ಅಸ್ತ್ರಗಳನ್ನೂ ಕೂಡ, ತಾಭ್ಯಾಂ = ಅವರಿಗೆ, ಉಪದಿದೇಶ = ಉಪದೇಶಿಸಿದರು.

ನಂತರ ಅವರಿಬ್ಬರನ್ನೂ ಕರೆದುಕೊಂಡುಹೋಗುತ್ತಾ ವಿಶ್ವಾಮಿತ್ರಮಹರ್ಷಿಯು ಬಲ ಮತ್ತು ಅತಿಬಲ ಎಂಬ ವಿದ್ಯೆಯ ಮಂತ್ರಗಳನ್ನೂ ಹಾಗೆಯೇ ಜೃಂಭಕಾದಿ ಸಕಲ ಅಸ್ತ್ರಗಳನ್ನೂ ಸಹ ಅವರಿಬ್ಬರಿಗೂ ಉಪದೇಶಿಸಿದರು.

**ಗಚ್ಛನ್ ಸಹಾನುಜೋ ರಾಮಃ ಕೌಶಿಕೇನ ಪ್ರಚೋದಿತಃ ।**
**ತಾಟಕಾಮವಧೀದ್ಧೀಮಾನ್ ಲೋಕಪೀಡನ ತತ್ಪರಾಮ್ ॥ ೩೧ ॥**

ಸಹಾನುಜಃ = ಸೋದರನೊಂದಿಗೆ ಕೂಡಿದವನಾದ, ಧೀಮಾನ್ = ಬುದ್ಧಿಶಾಲಿಯಾದ, ರಾಮಃ = ರಾಮನು, ಕೌಶಿಕೇನ = ವಿಶ್ವಾಮಿತ್ರರಿಂದ, ಪ್ರಚೋದಿತಃ = ಪ್ರೇರಿಸಲ್ಪಟ್ಟವನಾಗಿ, ಲೋಕಪೀಡನ ತತ್ಪರಾಂ = ಲೋಕವನ್ನು ಉಪದ್ರವ ನೀಡಿ ಪೀಡಿಸುತ್ತಿದ್ದ, ತಾಟಕಾಂ = ತಾಟಕೆ ಎನ್ನುವ ರಾಕ್ಷಸಿಯನ್ನು, ಅವಧೀತ್ = ಕೊಂದು ಹಾಕಿದನು.

ಸೋದರ ಸಮೇತನಾದ ಬುದ್ಧಿಶಾಲಿ ರಾಮಚಂದ್ರನು ವಿಶ್ವಾಮಿತ್ರರಿಂದ ಆದೇಶಿಸಲ್ಪಟ್ಟು ತೊಂದರೆಗಳಿಂದ ಲೋಕವನ್ನು ಪೀಡಿಸುತ್ತಿದ್ದ ತಾಟಕೆ ಎಂಬ ರಾಕ್ಷಸಿಯನ್ನು ಸಂಹಾರ ಮಾಡಿದನು.

**ತತಃ ಸಿದ್ಧಾಶ್ರಮಂ ಪ್ರಾಪ್ಯ ಕೌಶಿಕಃ ಸಹ ರಾಘವಃ ।**
**ಅಧ್ವರಂ ಚ ಸಮಾರೇಭೇ ರಾಕ್ಷಸಾಶ್ಚ ಸಮಾಗಮನ್ ॥ ೩೨ ॥**

ತತಃ = ನಂತರ, ಸಹರಾಘವಃ = ರಾಮನೊಂದಿಗೆ ಕೂಡಿ, ಕೌಶಿಕಃ = ವಿಶ್ವಾಮಿತ್ರರು, ಸಿದ್ಧಾಶ್ರಮಂ = ಸಿದ್ಧಾಶ್ರಮ ಎಂಬ ಹೆಸರಿನ ತಮ್ಮ ಪರ್ಣಶಾಲೆಯನ್ನು, ಪ್ರಾಪ್ಯ = ಸೇರಿ, ಅಧ್ವರಂ = ಯಾಗವನ್ನು, ಸಮಾರೇಭೇ = ಆರಂಭಿಸಿದರು. ರಾಕ್ಷಸಾಃ ಚ = ರಾಕ್ಷಸರೂ ಕೂಡ, ಸಮಾಗಮನ್ = ಬಂದರು.

ರಾಮನನ್ನೊಡಗೂಡಿ ವಿಶ್ವಾಮಿತ್ರರು ಸಿದ್ಧಾಶ್ರಮವನ್ನು ಸೇರಿ ಯಾಗವನ್ನು ಆರಂಭ ಮಾಡಿದರು. ಆಗ ರಾಕ್ಷಸರೂ ಕೂಡ ಅಲ್ಲಿಗೆ ಆಗಮಿಸಿದರು.

**ರಾಘವಸ್ತು ತತೋಽಸ್ತ್ರೇಣ ಕ್ಷಿಪ್ತ್ವಾ ಮಾರೀಚಮರ್ಣವೇ ।**
**ಸುಬಾಹು ಪ್ರಮುಖಾನ್ ಹತ್ವಾ ಯಜ್ಞಂ ಚಾಪಾಲಯನ್ ಮುನೇಃ ॥೩೪॥**

ತತಃ = ನಂತರ, ರಾಘವಃ ತು = ರಾಮನಾದರೋ, ಅಸ್ತ್ರೇಣ = ಅಸ್ತ್ರದಿಂದ, ಮಾರೀಚಂ = ಮಾರೀಚನೆಂಬ ರಾಕ್ಷಸನನ್ನು, ಅರ್ಣವೇ = ಸಮುದ್ರದಲ್ಲಿ, ಕ್ಷಿಪ್ತ್ವಾ = ತಳ್ಳಿ, ಸುಬಾಹು ಪ್ರಮುಖಾನ್ = ಸುಬಾಹುವೇ ಮೊದಲಾದ ಮುಖ್ಯಸ್ಥರನ್ನು, ಹತ್ವಾ = ಕೊಂದುಹಾಕಿ, ಮುನೇಃ = ಋಷಿಗಳಾದ ವಿಶ್ವಾಮಿತ್ರರ, ಯಜ್ಞಂ ಚ = ಮತ್ತು ಯಜ್ಞವನ್ನೂ, ಅಪಾಲಯತ್ = ಕಾಪಾಡಿದನು.

ರಾಮನು ಮಾರೀಚನೆಂಬುವ ರಾಕ್ಷಸನನ್ನು ತನ್ನ ಅಸ್ತ್ರದ ಸಹಾಯದಿಂದ ಸಮುದ್ರಕ್ಕೆ ತಳ್ಳಿ ಸುಬಾಹು ಮುಂತಾದವರನ್ನು ಕೊಂದು ಋಷಿಯಾದ ವಿಶ್ವಾಮಿತ್ರರ ಯಜ್ಞವನ್ನು ಕೂಡ ಕಾಪಾಡಿದನು.

**ಕೌಶಿಕೇನ ತತೋ ರಾಮೋ ನೀಯಮಾನಃ ಸಹಾನುಜಃ ।**
**ಅಹಲ್ಯಾ ಶಾಪ ನಿರ್ಮೋಕ್ಷಂ ಕೃತ್ವಾ ಸಂಪ್ರಾಪ ಮೈಥಿಲಂ ॥ ೩೫ ॥**

ತತಃ = ಅನಂತರ, ಕೌಶಿಕೇನ = ವಿಶ್ವಾಮಿತ್ರರಿಂದ, ಸಹಾನುಜಃ = ಸೋದರನಿಂದ ಒಡಗೊಂಡ, ರಾಮಃ = ರಾಮಚಂದ್ರನು, ನೀಯಮಾನಃ ಸನ್ = ಕರೆದೊಯ್ಯಲ್ಪಡುತ್ತಾ, ಅಹಲ್ಯಾ ಶಾಪ ನಿರ್ಮೋಕ್ಷಂ = ಅಹಲ್ಯೆಯ ಶಾಪದ ಬಿಡುಗಡೆ, ಕೃತ್ವಾ = ಮಾಡಿ, ಮೈಥಿಲಂ = ಮಿಥಿಲೆಯ ರಾಜನನ್ನು, ಸಂಪ್ರಾಪ = ಸೇರಿದನು.

ವಿಶ್ವಾಮಿತ್ರರಿಂದ, ಸೋದರನಿಂದ ಒಡಗೂಡಿದ ರಾಮಚಂದ್ರನು ಕರೆದೊಯ್ಯಲ್ಪಡುತ್ತಾ, ಅಹಲ್ಯೆಯ ಶಾಪವನ್ನು ಪರಿಹಾರ ಮಾಡಿ, ಮಿಥಿಲೆಯ ರಾಜನನ್ನು ಸೇರಿದನು.

**ಜನಕೇನಾರ್ಚಿತೋ ರಾಮಃ ಕೌಶಿಕೇನ ಪ್ರಚೋದಿತಃ**
**ಸೀತಾನಿಮಿತ್ತಮಾನೀಕಂ ಬಭಂಜ ಧನುರೈಶ್ವರಂ ॥ ೩೬ ॥**

ಜನಕೇನ = ಜನಕನಿಂದ, ಅರ್ಚಿತೋ ರಾಮಃ = ಪೂಜಿಸಲ್ಪಟ್ಟ ರಾಮಚಂದ್ರನು, ಕೌಶಿಕೇನ = ವಿಶ್ವಾಮಿತ್ರರಿಂದ, ಪ್ರಚೋದಿತಃ = ಪ್ರಚೋದಿಸಲ್ಪಟ್ಟವನಾಗಿ, ಸೀತಾ ನಿಮಿತ್ತಂ = ಸೀತೆಯ ಕಾರಣವಾಗಿ, ಆನೀತಂ = ತರಲ್ಪಟ್ಟ, ಐಶ್ವರಂ = ಈಶ್ವರನ, ಧನುಃ = ಬಿಲ್ಲನ್ನು, ಬಭಂಜ = ಮುರಿದುಹಾಕಿದನು.

ಜನಕ ಮಹಾರಾಜನಿಂದ ಅರ್ಚಿಸಲ್ಪಟ್ಟ ರಾಮಚಂದ್ರನು ವಿಶ್ವಾಮಿತ್ರರ ಪ್ರೇರಣೆಯಿಂದ ಸೀತೆಯ ವಿವಾಹ ನಿಮಿತ್ತವಾಗಿ ತರಲ್ಪಟ್ಟಿದ್ದ ಈಶ್ವರ ಧನುಸ್ಸನ್ನು ಮುರಿದುಹಾಕಿದನು.

**ತತೋ ದಶರಥಂ ದೂತೈಃ ಆನಾಯ್ಯ ಮಿಥಿಲಾಧಿಪಃ ।**
**ರಾಮಾದಿಭ್ಯಸ್ತತಸ್ತೇಭ್ಯಃ ಸೀತಾದ್ಯಾಃ ಕನ್ಯಕಾ ದದೌ ॥ ೩೭ ॥**

ತತಃ=ಅನಂತರದಲ್ಲಿ, ಮಿಥಿಲಾಧಿಪಃ=ಮಿಥಿಲೆಯ ರಾಜ ಜನಕನು, ದಶರಥಂ= ದಶರಥನನ್ನು, ದೂತೈಃ ಆನಾಯ್ಯ=ದೂತರಿಂದ ಕರೆಸಿ, ತತಃ = ನಂತರ, ತೇಭ್ಯಃ = ಆ, ರಾಮಾದಿಭ್ಯಃ=ರಾಮ ಮುಂತಾದವರಿಗೆ, ಸೀತಾದ್ಯಾಃ=ಸೀತೆ ಮೊದಲಾದ, ಕನ್ಯಕಾಃ=ಕನ್ಯೆಯರನ್ನು, ದದೌ = ಕೊಟ್ಟನು.

ಅನಂತರದಲ್ಲಿ ಮಿಥಿಲೆಯ ಅರಸನಾದ ಜನಕನು ದಶರಥನನ್ನು ದೂತರ ಮೂಲಕವಾಗಿ ಕರೆತರಿಸಿ ಆ ರಾಮಾದಿ ಸಹೋದರರಿಗೆ ಎಂದರೆ ರಾಮ, ಲಕ್ಷ್ಮಣ, ಭರತ, ಶತ್ರುಘ್ನರಿಗೆ ಸೀತೆಯೇ ಮೊದಲಾದ ಕನ್ಯೆಯರನ್ನು (ಸೀತೆ, ಊರ್ಮಿಳೆ, ಮಾಂಡವಿ, ಶ್ರುತಕೀರ್ತಿ) ಪಾಣಿಗ್ರಹಣ ಮಾಡಿಸಿದನು.

**ತತೋ ಗುರು ನಿಯೋಗೇನ ಕೃತೋದ್ವಾಹಃ ಸಹಾನುಜಃ ।**
**ರಾಘವೋ ನಿರ್ಯಯೌ ತೇನ ಜನಕೇನೋರುಮಾನಿತಃ ॥ ೩೮ ॥**

ತತಃ = ಅನಂತರ, ಗುರು ನಿಯೋಗೇನ = ತಂದೆಯ ಅಪ್ಪಣೆಯಂತೆ, ಕೃತೋ-ದ್ವಾಹಃ=ಮಾಡಲ್ಪಟ್ಟ ವಿವಾಹವುಳ್ಳವರಾಗಿ, ಸಹಾನುಜಃ=ಸೋದರರೊಡನೆ ಕೂಡಿದ, ರಾಘವಃ=ರಾಮನು, ತೇನ ಜನಕೇನ=ಆ ಜನಕನಿಂದ, ಉರುಮಾನಿತಃ= ಮಿಗಿಲಾಗಿ ಸತ್ಕರಿಸಲ್ಪಟ್ಟು, ನಿರ್ಯಯೌ= ಹೊರಡುವಂತಹವನಾದನು.

'ಅನ್ನದಾತಾ ಭಯತ್ರಾತ ವಿದ್ಯಾದಾತಾ ತಥೈವ ಚ । ಜನಿತಾ ಚ ಉಪನೀತಾ ಚ ಪಂಚೈತೇ ಗುರವಸ್ಮೃತಃ' ಎಂಬ ಶ್ಲೋಕದಂತೆ ಅನ್ನದಾತ, ಭಯದಿಂದ ರಕ್ಷಿಸಿದವನು, ವಿದ್ಯೆಯನ್ನು ನೀಡಿದವನು, ಜನ್ಮ ನೀಡಿದವನು, ಉಪನಯನ ಮಾಡಿದವನು ಈ ಐವರೂ ಗುರುಗಳೆಂದು ಶ್ಲೋಕವುಂಟು. ಅದರ ಪ್ರಕಾರ ಗುರು ಎಂದರೆ ತಂದೆ ಎಂಬ ಅರ್ಥವಾಗುತ್ತದೆ.

ನಂತರ ತಂದೆಯ ಆದೇಶದಂತೆ ಮದುವೆ ಮಾಡಿಕೊಂಡವನಾಗಿ ರಾಮಚಂದ್ರನು ಸೋದರರ ಸಮೇತನಾಗಿ ಜನಕಮಹಾರಾಜನಿಂದ ವಿಶೇಷವಾಗಿ ಸತ್ಕರಿಸಲ್ಪಟ್ಟು ಅಯೋಧ್ಯೆಗೆ ಹಿಂತಿರುಗಲನುವಾದನು.

**ತದಾಕರ್ಣ್ಯ ಧನುರ್ಭಂಗಂ ಆಯಾಂತಂ ರೋಷಭೀಷಣಂ ।**
**ವಿಜಿತ್ಯ ಭಾರ್ಗವಂ ರಾಮಂ ಅಯೋಧ್ಯಾಂ ಪ್ರಾಪ ರಾಘವಃ ॥ ೩೯ ॥**

ತತ್ = ಆ, ಧನುರ್ಭಂಗಂ = ಧನುಸ್ಸನ್ನು ಮುರಿದ ವೃತ್ತಾಂತವನ್ನು, ಆಕರ್ಣ್ಯ = ಕೇಳಿ, ಆಯಾತಂ = ಬರುತ್ತಿರುವ, ರೋಷಭೀಷಣಂ = ಕೋಪದಿಂದ

ಉಗ್ರನಾದ, ಭಾರ್ಗವಂ = ಭೃಗುಕುಲದ, ರಾಮಂ = ರಾಮನನ್ನು (ಪರಶುರಾಮನನ್ನು), ವಿಜಿತ್ಯ = ಜಯಿಸಿ, ರಾಘವಃ = ರಘುವಂಶ ಕುಲೋತ್ಪನ್ನನಾದ ರಾಮಚಂದ್ರನು, ಅಯೋಧ್ಯಾಂ = ಅಯೋಧ್ಯೆಯನ್ನು, ಪ್ರಾಪ = ಸೇರಿದನು.

ಆ ಧನುರ್ಭಂಗದ ವೃತ್ತಾಂತವನ್ನು ಕೇಳಿ ಅಲ್ಲಿಗೆ ಬರುತ್ತಿದ್ದ, ಕೋಪದಿಂದ ಉಗ್ರನಾಗಿದ್ದ ಭೃಗುಕುಲದ ಪರಶುರಾಮನನ್ನು ರಘುರಾಮನು ಜಯಿಸಿ ಅಯೋಧ್ಯೆಯನ್ನು ಸೇರಿದನು.

**ತತಃ ಸರ್ವಜನಾನಂದಂ ಕುರ್ವಾಣಶ್ಚೇಷ್ಟಿತೈಃ ಸ್ವಕೈಃ ।**
**ತಾ ಮುಧ್ಯುವಾಸ ಕಾಕುಸ್ಥಃ ಸೀತಯಾ ಸಹಿತಸ್ಸುಖಂ** ॥ ೪೦ ॥

ತತಃ = ನಂತರ, ಸ್ವಕೈಃ = ತನ್ನ, ಚೇಷ್ಟಿತೈಃ = ಕೃತಿಗಳಿಂದ, ಸರ್ವಜನಾನಂದಂ = ಎಲ್ಲ ಜನರಿಗೂ ಆನಂದವನ್ನು, ಕುರ್ವಾಣಃ = ಉಂಟುಮಾಡುತ್ತಾ, ಕಾಕುಸ್ಥಃ = ಕಾಕುಸ್ಥ ವಂಶದವನಾದ ರಾಮಚಂದ್ರನು, ಸೀತಯಾ = ಸೀತೆಯಿಂದ, ಸಹಿತಃ = ಸಮೇತನಾಗಿ, ತಾಂ = ಅಯೋಧ್ಯೆಯನ್ನು, ಸುಖಂ = ಸುಖವಾಗಿ, ಅಧ್ಯುವಾಸ = ವಾಸಮಾಡಿದನು.

ತನ್ನ ಕೃತಿಗಳಿಂದ ಸರ್ವ ಜನರಿಗೂ ಸಂತೋಷವನ್ನುಂಟುಮಾಡುತ್ತಾ ಕಾಕುಸ್ಥ ರಾಮನು ಸೀತೆಯೊಡನೆ ಅಯೋಧ್ಯೆಯಲ್ಲಿ ಸುಖವಾಗಿ ವಾಸಮಾಡಿದನು.

**ಇತಿ ಬಾಲಕಾಂಡಃ**

ಬಾಲಕಾಂಡವು ಮುಗಿಯಿತು

# ಅಥ ಅಯೋಧ್ಯಾಕಾಂಡಃ

## ಅಯೋಧ್ಯಾಕಾಂಡ

**ಏತಸ್ಮಿನಂತರೇ ಗೇಹಂ ಮಾತುಲಸ್ಯ ಯುಧಾಜಿತಃ ।**
**ಪ್ರಯಯೌ ಭರತಃ ಪ್ರೀತಃ ಶತ್ರುಘ್ನೇನ ಸಮನ್ವಿತಃ ॥ ೧ ॥**

ಏತಸ್ಮಿನ್ ಅಂತರೇ=ಇದೇ ಸಮಯದಲ್ಲಿ, ಮಾತುಲಸ್ಯ = ಸೋದರಮಾವನಾದ, ಯುಧಾಜಿತಃ = ಯುಧಾಜಿತ್ ಎಂಬುವವನ, ಗೇಹಂ = ಮನೆಗೆ, ಪ್ರೀತಃ = ಸಂತುಷ್ಟ ನಾದ, ಭರತಃ = ಭರತನು, ಶತ್ರುಘ್ನೇನ = ಶತ್ರುಘ್ನನಿಂದ, ಸಮನ್ವಿತಃ = ಒಡಗೂಡಿ ದವನಾಗಿ, ಪ್ರಯಯೌ = ಪ್ರಯಾಣಮಾಡಿದನು (ಹೋದನು).

ಇದೇ ಸಮಯುದಲ್ಲಿ ಸೋದರಮಾವನಾದ ಯುಧಾಜಿತನ ಮನೆಗೆ ಸಂತೋಷ ದಿಂದ ಕೂಡಿದ ಭರತನು ಶತ್ರುಘ್ನ ಸಮೇತನಾಗಿ ಹೋದನು.

**ತತಃ ಪ್ರಕೃತಿಭಿಃ ಸಾಕಂ ಮಂತ್ರಯಿತ್ವಾ ಸ ಭೂಪತಿಃ**
**ಅಭಿಷೇಕಾಯ ರಾಮಸ್ಯ ಸಮಾರೇಭೇ ಮುದಾನ್ವಿತಃ ॥ ೨ ॥**

ತತಃ = ನಂತರ, ಸಃ ಭೂಪತಿಃ = ಆ ರಾಜನಾದ ದಶರಥನು, ಪ್ರಕೃತಿಭಿಃ = ಪ್ರಜೆಗಳಿಂದ, ಸಾಕಂ = ಕೂಡಿ, ಮಂತ್ರಯಿತ್ವಾ = ಆಲೋಚಿಸಿ, ಮುದಾನ್ವಿತಃ = ಸಂತೋಷದಿಂದ, ರಾಮಸ್ಯ = ರಾಮನ, ಅಭಿಷೇಕಾಯ = ಪಟ್ಟಾಭಿಷೇಕಕ್ಕಾಗಿ, ಸಮಾರೇಭೇ = ಏರ್ಪಾಡು ಮಾಡಿಸಿದನು.

ರಾಜನಾದ ದಶರಥನು ಪ್ರಜೆಗಳಿಂದ ಕೂಡಿ ಸಮಾಲೋಚನೆ ನಡೆಸಿ ಸಂತೋಷ ದಿಂದ ರಾಮನ ಪಟ್ಟಾಭಿಷೇಕಕ್ಕೆ ಏರ್ಪಾಡು ಮಾಡಿದನು.

**ಕೈಕೇಯಿತು ಮಹೀಪಾಲಂ ಮಂಥರಾ ದೂಶಿತಾಶಯಾ ।**
**ವರದ್ವಯಂ ಪುರಾದತ್ತಂ ಯಯಾಚೇ ಸತ್ಯಸಂಗರಂ ॥ ೩ ॥**

ಕೈಕೇಯಿತು = ಕೈಕೇಯಿಯಾದರೋ, ಮಂಥರಾ ದೂಶಿತ ಆಶಯಾ = ಮಂಥರೆಯಿಂದ ಕೆಟ್ಟ ಆಶಯವನ್ನು ಹೊಂದಿದಂತಹವಳಾಗಿ, ಪುರಾ = ಹಿಂದೆ, ದತ್ತಂ = ನೀಡಲ್ಪಟ್ಟ, ವರದ್ವಯಂ = ಎರಡು ವರಗಳನ್ನು, ಸತ್ಯಸಂಗರಂ = ಸತ್ಯ ಪ್ರತಿಜ್ಞನಾದ, ಮಹೀಪಾಲಂ = ಮಹಾರಾಜನನ್ನು, ಯಯಾಚೇ = ಕೇಳಿದಳು.

ಮಂಥರೆಯಿಂದ ಕೆಟ್ಟ ಆಶಯವನ್ನು ಹೊಂದಿದಂತಹ ಕೈಕೇಯಿಯಾದರೋ ಹಿಂದೆ ನೀಡಲ್ಪಟ್ಟಿದ್ದ ಎರಡು ವರಗಳನ್ನು ಸತ್ಯಪ್ರತಿಜ್ಞನಾದ ದಶರಥ ಮಹಾರಾಜನಲ್ಲಿ ಯಾಚಿಸಿದಳು.

**ವನವಾಸಾಯ ರಾಮಸ್ಯ ರಾಜ್ಯಾಪ್ತ್ಯೈ ಭರತಸ್ಯ ಚ ।**
**ತಸ್ಯಾ ವರದ್ವಯಂ ಕೃಚ್ಛ್ರಂ ಅನುಜಜ್ಞೇ ಮಹೀಪತಿಃ ॥ ೪ ॥**

ರಾಮಸ್ಯ = ರಾಮನ, ವನವಾಸಾಯ = ವನವಾಸವನ್ನೂ, ಭರತಸ್ಯ = ಭರತನ, ರಾಜ್ಯ ಆಪ್ತ್ಯೈ ಚ = ರಾಜ್ಯವನ್ನು ಹೊಂದತಕ್ಕದ್ದಾದ, ತಸ್ಯಾ = ಅವಳ, ವರದ್ವಯಂ = ಎರಡು ವರಗಳನ್ನು, ಮಹೀಪತಿಃ = ರಾಜನು, ಕೃಚ್ಛ್ರಂ = ಬಹಳ ಪ್ರಯಾಸದಿಂದ, ಅನುಜಜ್ಞೇ = ಅನುಮತಿಸಿದನು.

ರಾಮನ ವನವಾಸವನ್ನೂ, ಭರತನ ರಾಜ್ಯಪ್ರಾಪ್ತಿಯನ್ನೂ ಕೋರುವ ಅವಳ ಎರಡು ವರಗಳನ್ನು ರಾಜನು ಅತಿ ಪ್ರಯಾಸದಿಂದ ಅನುಮತಿಸಿದನು.

**ರಾಮಂ ತದೈವ ಕೈಕೇಯೀ ವನವಾಸಾಯ ಚಾದಿಶತ್ ।**
**ಅನುಜ್ಞಾಪ್ಯ ಗುರೂನ್ ಸರ್ವಾನ್ ನಿರ್ಯಯೌ ಚ ವನಾಯ ಸಃ ॥ ೫ ॥**

ತದಾ ಏವ = ಆಗಲೇ, ಕೈಕೇಯೀ ಚ = ಕೈಕೇಯಿಯೂ ಸಹ, ರಾಮಂ = ರಾಮನನ್ನು, ವನವಾಸಾಯ = ವನವಾಸಕ್ಕೆ, ಆದಿಶತ್ = ಅಪ್ಪಣೆ ಮಾಡಿದಳು, ಸಃ ಚ = ಅವನೂ ಸಹ, ಸರ್ವಾನ್ = ಎಲ್ಲಾ, ಗುರೂನ್ = ಗುರುಹಿರಿಯರ, ಅನುಜ್ಞಾಪ್ಯ = ಅಪ್ಪಣೆ ಪಡೆದು, ವನಾಯ = ಕಾಡಿಗೆ, ನಿರ್ಯಯೌ = ಹೊರಟನು.

ಆಗಲೇ ಕೈಕೇಯಿಯೂ ಕೂಡ ರಾಮನನ್ನು ವನವಾಸಕ್ಕೆ ಹೋಗಲು ಅಪ್ಪಣೆ ಮಾಡಿದಳು. ಅವನೂ ಸಹ ಎಲ್ಲಾ ಹಿರಿಯರಿಂದಲೂ ಅಪ್ಪಣೆ ಪಡೆದು ಕಾಡಿಗೆ ಹೊರಟನು.

**ದೃಷ್ಟ್ವಾ ತಂ ನಿರ್ಗತಂ ಸೀತಾ ಲಕ್ಷ್ಮಣಶ್ಚಾನುಜಗ್ಮತುಃ ।**
**ಸಂತ್ಯಜ್ಯ ಸ್ವಗೃಹಾನ್ ಸರ್ವೇ ಪೌರಾಶ್ಚಾನುಯಯುರ್ದ್ರುತಂ ॥ ೬ ॥**

ನಿರ್ಗತಂ = ಹೊರಟುನಿಂತ, ತಂ = ಆತನನ್ನು, ದೃಷ್ಟ್ವಾ = ನೋಡಿ, ಸೀತಾ = ಸೀತೆಯೂ, ಲಕ್ಷ್ಮಣಃ ಚ = ಲಕ್ಷ್ಮಣನೂ ಸಹ, ಅನುಜಗ್ಮತುಃ = ಹಿಂಬಾಲಿಸಿದರು. ಸರ್ವೇ = ಎಲ್ಲಾ, ಪೌರಾಃ ಚ = ಪುರಜನರೂ ಸಹ ಸ್ವಗೃಹಾನ್ = ತಮ್ಮ ಮನೆಗಳನ್ನು, ಸಂತ್ಯಜ್ಯ = ಬಿಟ್ಟು, ದ್ರುತಂ = ಬೇಗನೆ, ಅನುಯಯುಃ = ಹಿಂಬಾಲಿಸಿದರು.

ಹೀಗೆ ಹೊರಟು ನಿಂತ ಆ ರಾಮನನ್ನು ನೋಡಿ ಸೀತೆಯೂ ಮತ್ತು ಲಕ್ಷ್ಮಣನೂ ಕೂಡ ಹಿಂಬಾಲಿಸಿದರು. ಎಲ್ಲಾ ಪುರಜನರೂ ಕೂಡ ತಮ್ಮ ತಮ್ಮ ಮನೆಗಳನ್ನು ತ್ಯಜಿಸಿ ಶೀಘ್ರವಾಗಿ ಅವನನ್ನು ಹಿಂಬಾಲಿಸಿದರು.

**ವಂಚಯಿತ್ವಾ ಕೃಶಾನ್ ಪೌರಾನ್ ನಿದ್ರಾಣಾನ್ ನಿಶಿ ರಾಘವಃ ।**
**ವಾಹ್ಯಮಾನಂ ಸುಮಂತ್ರೇಣ ರಥಮಾರುಹ್ಯ ಚಾಗಮತ್ ॥ ೭ ॥**

ರಾಘವಃ = ರಘುರಾಮನು, ನಿಶಿ = ರಾತ್ರಿಯಲ್ಲಿ, ನಿದ್ರಾಣಾನ್ = ನಿದ್ರಿಸುತ್ತಿದ್ದ, ಕೃಶಾನ್ ಚ = ಆಯಾಸದಿಂದಲೂ ಕೂಡಿದ್ದ, ಪೌರಾನ್ = ಪುರಜನರನ್ನು, ವಂಚಯಿತ್ವಾ = ವಂಚಿಸಿ, ಸುಮಂತ್ರೇಣ = ಸುಮಂತ್ರನಿಂದ, ವಾಹ್ಯಮಾನಂ = ಓಡಿಸಲ್ಪಟ್ಟ, ರಥಂ = ರಥವನ್ನು, ಆರುಹ್ಯ = ಹತ್ತಿ, ಅಗಮತ್ = ಹೊರಟನು.

ರಾಮನು ರಾತ್ರಿಯಲ್ಲಿ ಆಯಾಸಗೊಂಡು ನಿದ್ರಿಸುತ್ತಿದ್ದ ಪೌರರನ್ನು ವಂಚಿಸಿ ಸುಮಂತ್ರನಿಂದ ಓಡಿಸಲ್ಪಟ್ಟ ರಥವನ್ನು ಆರೋಹಿಸಿ ಹೊರಟನು.

**ಶೃಂಗಿಬೇರಪುರಂ ಗತ್ವಾ ಗಂಗಾಕೂಲೇಥ ರಾಘವಃ ।**
**ಗುಹೇನ ಸತ್ಕೃತಸ್ತತ್ರ ನಿಶಾಮೇಕಾಮುವಾಸ ಚ ॥ ೮ ॥**

ಗಂಗಾಕೂಲೇ = ಗಂಗೆಯ ದಡದಲ್ಲಿ, ಶೃಂಗಿಬೇರಪುರಂ = ಶೃಂಗಿಬೇರಪುರಕ್ಕೆ, ಗತ್ವಾ = ಹೋಗಿ, ರಾಘವಃ = ರಘುರಾಮನು, ಗುಹೇನ = ಗುಹನಿಂದ, ಸತ್ಕೃತಃ = ಸತ್ಕರಿಸಲ್ಪಟ್ಟು, ತತ್ರ ಚ = ಅಲ್ಲಿಯಾದರೋ, ಏಕಾಂ = ಒಂದು, ನಿಶಾಂ = ರಾತ್ರಿಯನ್ನು, ಉವಾಸ = ಕಳೆದನು.

ಗಂಗಾನದಿಯ ದಡದಲ್ಲಿದ್ದ ಶೃಂಗಿಬೇರಪುರವನ್ನು ಸೇರಿ ರಾಮನು ಗುಹನೆಂಬ ಬೇಡರ ರಾಜನಿಂದ ಸತ್ಕರಿಸಲ್ಪಟ್ಟು ಅಲ್ಲಿಯೇ ಒಂದು ರಾತ್ರಿಯನ್ನು ಕಳೆದನು.

**ಸಾರಥಿಂ ಸನ್ನಿಮಂತ್ರ್ಯಾಸೌ ಸೀತಾಲಕ್ಷ್ಮಣ ಸಂಯುತಃ ।**
**ಗುಹೇನಾನೀತಯಾ ನಾವಾ ಸಂತತಾರ ಚ ಜಾಹ್ನವೀಂ ॥ ೯ ॥**

ಅಸೌ = ಈ ರಾಮನು, ಸಾರಥಿಂ = ಸಾರಥಿಯನ್ನು, ಸನ್ನಿಮಂತ್ರ್ಯ = ಬೀಳ್ಕೊಟ್ಟು ಸೀತಾಲಕ್ಷ್ಮಣ ಸಂಯುತಃ = ಸೀತಾಲಕ್ಷ್ಮಣ ಸಮೇತ, ಗುಹೇನ = ಗುಹನಿಂದ, ಆನೀತಯಾ = ತರಲ್ಪಟ್ಟ, ನಾವಾ = ದೋಣಿಯಿಂದ, ಜಾಹ್ನವೀಂ = ಗಂಗಾನದಿಯನ್ನು, ಸಂತತಾರ = ದಾಟಿದನು.

ಈ ರಾಮನು ಸಾರಥಿಯನ್ನು ಬೀಳ್ಕೊಟ್ಟು, ಸೀತೆ ಮತ್ತು ಲಕ್ಷ್ಮಣರ ಸಂಗಡ ಗುಹನಿಂದ ತರಲ್ಪಟ್ಟ ನಾವೆಯಲ್ಲಿ ಗಂಗಾನದಿಯನ್ನು ದಾಟಿದನು.

**ಭರದ್ವಾಜ ಮುನಿಂ ಪ್ರಾಪ್ಯ ತಂ ನತ್ವಾ ತೇನ ಸತ್ಕೃತಃ ।**
**ರಾಘವಸ್ತಸ್ಯ ನಿರ್ದೇಶಾತ್ ಚಿತ್ರಕೂಟೇವಸತ್ ಸುಖಂ ॥ ೧೦ ॥**

ರಾಘವಃ = ರಾಮನು, ಭಾರದ್ವಾಜ ಮುನಿಂ = ಭಾರದ್ವಾಜ ಮುನಿಗಳನ್ನು, ಪ್ರಾಪ್ಯ = ಸೇರಿ, ತಂ = ಅವರನ್ನು, ನತ್ವಾ = ನಮಸ್ಕರಿಸಿ, ತೇನ = ಅವರಿಂದ, ಸತ್ಕೃತಃ = ಸತ್ಕರಿಸಲ್ಪಟ್ಟು, ತಸ್ಯ = ಅವರ, ನಿರ್ದೇಶಾತ್ = ನಿರ್ದೇಶನದಂತೆ, ಚಿತ್ರ-ಕೂಟೇ = ಚಿತ್ರಕೂಟದಲ್ಲಿ, ಸುಖಂ = ಸುಖದಿಂದ, ಅವಸತ್ = ವಾಸಿಸಿದನು.

ರಾಮಚಂದ್ರನು ಭರದ್ವಾಜಾಶ್ರಮವನ್ನು ಸೇರಿ ಅವರಿಗೆ ನಮಸ್ಕರಿಸಿ ಅವರಿಂದ ಸತ್ಕೃತನಾಗಿ ಅವರ ಆದೇಶದಂತೆ ಚಿತ್ರಕೂಟವೆಂಬ ಪ್ರದೇಶವನ್ನು ಸೇರಿ ಅಲ್ಲಿ ಸುಖವಾಗಿ ವಾಸಿಸಿದನು.

**ಅಯೋಧ್ಯಾಯಾಂತು ತತೋಗತ್ವಾ ಸುಮಂತ್ರಃ ಶೋಕವಿಹ್ವಲಃ ।**
**ರಾಜ್ಞೇ ನ್ಯವೇದಯತ್ ಸರ್ವಂ ರಾಘವಸ್ಯ ವಿಚೇಷ್ಟಿತಂ ॥ ೧೧ ॥**

ತತಃ = ಅನಂತರ, ಸುಮಂತ್ರಃ = ಸುಮಂತ್ರನು, ಅಯೋಧ್ಯಾಂ = ಅಯೋಧ್ಯೆಯನ್ನು, ಗತ್ವಾ = ಸೇರಿ, ಶೋಕವಿಹ್ವಲಃ = ಶೋಕದಿಂದ ಏನೂ ತೋರದವನಾಗಿ, ರಾಘವಸ್ಯ = ರಾಮಚಂದ್ರನ, ಸರ್ವಂ = ಎಲ್ಲಾ, ವಿಚೇಷ್ಟಿತಂ = ಕೃತಿಗಳನ್ನು, ರಾಜ್ಞೇ = ರಾಜನಲ್ಲಿ, ನ್ಯವೇದಯತ್ = ನಿವೇದಿಸಿದನು.

ನಂತರ ಸುಮಂತ್ರನು ಅಯೋಧ್ಯೆಯನ್ನು ಸೇರಿ ಶೋಕಭಾರದಿಂದ ಏನೂ ತೋರದೆ ರಾಮನ ಕೃತಿಗಳನ್ನೆಲ್ಲವನ್ನೂ ರಾಜನಲ್ಲಿ ನಿವೇದಿಸಿದನು.

**ತದಾಕರ್ಣ್ಯ ಸುಮಂತ್ರೋಕ್ತಂ ರಾಜಾ ದುಃಖವಿಮೂಢಧೀಃ ।**
**'ರಾಮ ರಾಮೇ'ತಿ ವಿಲಪನ್ ದೇಹಂ ತ್ಯಕ್ತ್ವಾ ದಿವಂ ಯಯೌ ॥ ೧೨ ॥**

ಸುಮಂತ್ರ ಉಕ್ತಂ = ಸುಮಂತ್ರನಿಂದ ಹೇಳಲ್ಪಟ್ಟ, ತತ್ ಆಕರ್ಣ್ಯ = ಆ ರಾಮಚಂದ್ರನ ವೃತ್ತಾಂತವನ್ನೂ ಕೇಳಿ, ದುಃಖವಿಮೂಢಧೀಃ = ದುಃಖದಿಂದ ಏನೂ ತೋಚದವನಾಗಿ, ರಾಜಾ = ರಾಜನು, "ರಾಮ ರಾಮ" ಇತಿ = ರಾಮ, ರಾಮ ಎಂಬುದಾಗಿ, ವಿಲಪನ್ = ಪ್ರಲಾಪಿಸುತ್ತಾ, ದೇಹಂ ತ್ಯಕ್ತ್ವಾ = ದೇಹವನ್ನು ತ್ಯಜಿಸಿ, ದಿವಂ ಯಯೌ = ಸ್ವರ್ಗವನ್ನು ಸೇರಿದನು.

ಸುಮಂತ್ರನಿಂದ ವಿವರಿಸಲ್ಪಟ್ಟ ರಾಮನ ವೃತ್ತಾಂತವೆಲ್ಲವನ್ನೂ ಕೇಳಿ ಏನೂ ತೋಚದೆ "ರಾಮ, ರಾಮ" ಎಂದು ಪ್ರಲಾಪಿಸುತ್ತಾ ದೇಹವನ್ನು ತ್ಯಜಿಸಿ ಸ್ವರ್ಗವನ್ನು ಸೇರಿದನು.

**ಮಂತ್ರಿಣಸ್ತು ವಸಿಷ್ಠೋಕ್ತ್ಯಾ ದೇಹಂ ಸಂರಕ್ಷ್ಯ ಭೂಪತೇಃ**
**ದೂತೈರಾನಾಯಯಾಮಾಸುಃ ಭರತಂ ಮಾತುಲಾಲಯಾತ್ ॥ ೧೩ ॥**

ಮಂತ್ರಿಣಃ ತು = ಮಂತ್ರಿಗಳಾದರೋ, ವಸಿಷ್ಠ ಉಕ್ತ್ಯಾ = ವಸಿಷ್ಠರ ಮಾತಿನಂತೆ, ಭೂಪತೇಃ = ರಾಜನಾದ ದಶರಥನ, ದೇಹಂ = ದೇಹವನ್ನು, ಸಂರಕ್ಷ್ಯ = ಸಂರಕ್ಷಿಸಿ, ಮಾತುಲಾಲಯಾತ್ = ಸೋದರಮಾವನ ಮನೆಯಿಂದ, ಭರತಂ = ಭರತನನ್ನು, ದೂತೈಃ = ಆಳುಗಳ ಮೂಲಕ, ಆನಾಯಯಾಮಾಸುಃ = ಕರೆತರಿಸಿದರು.

ಮಂತ್ರಿಗಳು ವಸಿಷ್ಠರ ಆದೇಶದಂತೆ ಅರಸನಾದ ದಶರಥನ ದೇಹವನ್ನು ಸಂರಕ್ಷಿಸಿ ಸೋದರಮಾವನ ಮನೆಯಿಂದ ಭರತನನ್ನು ದೂತರ ಮೂಲಕ ಕರೆತರಿಸಿದರು.

**ಭರತಸ್ತು ಮೃತಂ ಶ್ರುತ್ವಾ ಪಿತರಂ ಕೈಕೆಯೀ ಗಿರಾ ।**
**ಸಂಸ್ಕಾರಾದಿ ಚಕಾರಾಸ್ಯಾ ಯಥಾವಿಧಿ ಸಹಾನುಜಃ ॥ ೧೪ ॥**

ಭರತಸ್ತು = ಭರತನಾದರೋ, ಕೈಕೆಯೀ ಗಿರಾ = ಕೈಕೇಯಿಯ ಮಾತುಗಳಿಂದ ಪಿತರಂ = ತಂದೆಯನ್ನು, ಮೃತಂ = ಸತ್ತಿರುವನೆಂಬುದಾಗಿ, ಶ್ರುತ್ವಾ = ತಿಳಿದು, ಸಹಾನುಜ = ತಮ್ಮನೊಡನೆ ಕೂಡಿ, ಅಸ್ಯ = ಅವನ (ದಶರಥನ), ಸಂಸ್ಕಾರಾದಿ = ಸಂಸ್ಕಾರ ಕರ್ಮಗಳನ್ನು, ಯಥಾವಿಧಿ - ವಿಧಿವತ್ತಾಗಿ, ಚಕಾರ = ಮಾಡಿದನು.

ಭರತನಾದರೋ ಕೈಕೇಯಿಯ ಮಾತುಗಳಿಂದ ತಂದೆಯು ಮೃತನಾಗಿರುವ ವಿಷಯವನ್ನರಿತು ತಮ್ಮನೊಂದಿಗೆ ಕೂಡಿ ಆತನ ಸಂಸ್ಕಾರಾದಿ ಕರ್ಮಗಳನ್ನು ಶಾಸ್ತ್ರವತ್ತಾಗಿ ನೆರವೇರಿಸಿದನು.

**ಅಮಾತ್ಯೈಶ್ಚೋದ್ಯಮಾನೋಽಪಿ ರಾಜ್ಯಾಯ ಭರತಸ್ತದಾ ।**
**ವನಾಯೈವ ಯಯೌ ರಾಮಂ ಆನೇತುಂ ನಾಗರೈಸ್ಸಹ ॥ ೧೫ ॥**

ತದಾ = ಆಗ, ಭರತಃ = ಭರತನು, ಅಮಾತ್ಯೈಃ = ಮಂತ್ರಿಗಳಿಂದ, ರಾಜ್ಯಾಯ = ರಾಜ್ಯದ ವಿಚಾರದಲ್ಲಿ, ಚೋದ್ಯಮಾನಃ ಅಪಿ = ಪ್ರೇರಿಸಲ್ಪಟ್ಟವನಾಗಿ, ರಾಮಂ = ರಾಮನನ್ನು, ಆನೇತುಂ = ಕರೆತರಲು, ನಾಗರೈಃ ಸಹ = ನಾಗರೀಕರ ಸಂಗಡ, ವನಾಯ ಏವ = ಕಾಡಿಗೆ, ಯಯೌ = ಹೋದನು.

ಆಗ ಭರತನು ಮಂತ್ರಿಗಳಿಂದ ರಾಜ್ಯದ ವಿಚಾರದಲ್ಲಿ ಪ್ರೇರೇಪಿಸಲ್ಪಟ್ಟವನಾಗಿ ರಾಮನನ್ನು ಕರೆದು ತರಲು ಪುರಜನರ ಜೊತೆಯಲ್ಲಿ ಕಾಡಿಗೆ ಹೋದನು.

**ಸಗತ್ವಾ ಚಿತ್ರಕೂಟಸ್ಥಂ ರಾಮಂ ಚೀರ ಜಟಾಧರಂ ।**
**ಯಯಾಚೇ ರಕ್ಷಿತುಂ ರಾಜ್ಯಂ ವಸಿಷ್ಠಾದ್ಯೈಃ ದ್ವಿಜೈಃ ಸಹ ॥ ೧೬ ॥**

ಸಃ = ಅವನು, ವಸಿಷ್ಠ ಆದ್ಯೈಃ = ವಸಿಷ್ಠರೇ ಮೊದಲಾದ, ದ್ವಿಜೈಃ ಸಹ = ಬ್ರಾಹ್ಮಣರ ಜೊತೆ, ಗತ್ವಾ = ಹೊರಟು, ಚಿತ್ರಕೂಟಸ್ಥಂ = ಚಿತ್ರಕೂಟದಲ್ಲಿ ವಾಸ

ವಾಗಿದ್ದ, **ಚೀರಜಟಾಧರಂ**=ನಾರುಮಡಿ ಮತ್ತು ಜಟಾಧಾರಿಯಾದ, **ರಾಮಂ**=ರಾಮನನ್ನು, **ರಾಜ್ಯಂ**=ರಾಜ್ಯವನ್ನು, **ರಕ್ಷಿತುಂ**=ಕಾಪಾಡಲು, **ಯಯಾಚೇ**=ಯಾಚಿಸಿದನು.

ಅವನು ವಸಿಷ್ಠಾದಿ ಬ್ರಾಹ್ಮಣರ ಸಂಗಡ ಹೋಗಿ ಚಿತ್ರಕೂಟದಲ್ಲಿ ನಾರುಮಡಿ ಮತ್ತು ಜಟಾಧಾರಿಯಾಗಿ ವಾಸಮಾಡುತ್ತಿದ್ದ ರಾಮನನ್ನು ರಾಜ್ಯವನ್ನು ಕಾಪಾಡಲು ಯಾಚನೆ ಮಾಡಿದನು.

**" ಚತುರ್ದಶ ಸಮಾನೀತ್ವಾ ಪುನರೇಷ್ಯಾಮ್ಯಹಂ ಪುರೀಂ " ।**
**ಇತ್ಯುಕ್ತ್ವಾ ಪಾದುಕೇ ದತ್ವಾ ತಂ ರಾಮಃ ಪ್ರತ್ಯಯಾಪಯತ್ ॥ ೧೭ ॥**

ಅಹಂ=ನಾನು, ಚತುರ್ದಶ=ಹದಿನಾಲ್ಕು, ಸಮಾಃ=ವರ್ಷಗಳನ್ನು, ನೀತ್ವಾ=ಕಳೆದು, ಪುನಃ=ಮತ್ತೆ, ಪುರೀಂ=ಪಟ್ಟಣವನ್ನು ಕುರಿತು, ಏಷ್ಯಾಮಿ=ಬರುತ್ತೇನೆ. ಇತಿ=ಹೀಗೆ, ಉಕ್ತ್ವಾ=ಹೇಳಿ, ಪಾದುಕೇ=ಪಾದುಕೆಗಳನ್ನು, ದತ್ವಾ=ನೀಡಿ, ತಂ=ಅವನನ್ನು (ಭರತನನ್ನು), ರಾಮಃ=ರಾಮಚಂದ್ರನು, ಪ್ರತ್ಯಯಾಪಯತ್=ವಾಪಸ್ಸು ಕಳುಹಿಸಿದನು.

"ನಾನು ಹದಿನಾಲ್ಕು ವರ್ಷಗಳನ್ನು ಮುಗಿಸಿ ನಂತರ ಪಟ್ಟಣಕ್ಕೆ ವಾಪಸ್ಸು ಬರುತ್ತೇನೆ" ಎಂದು ಹೇಳಿ ಪಾದುಕೆಗಳನ್ನು ನೀಡಿ ರಾಮಚಂದ್ರನು ಭರತನನ್ನು ವಾಪಸ್ಸು ಕಳುಹಿಸಿದನು

**ಗೃಹೀತ್ವಾ ಪಾದುಕೇ ತಸ್ಮಾದ್ ಭರತೋ ದೀನಮಾನಸಃ ।**
**ನಂದಿಗ್ರಾಮೇ ಸ್ಥಿತಸ್ತಾಭ್ಯಾಂ ರರಕ್ಷ ಚ ವಸುಂಧರಾಂ ॥ ೧೮ ॥**

ದೀನಮಾನಸಃ=ದುಃಖದಿಂದ ಕೂಡಿದ ಮನಸ್ಸುಳ್ಳವನಾದ, ಭರತ=ಭರತನು, ತಸ್ಮಾತ್=ರಾಮನಿಂದ, ಪಾದುಕೇ=ಪಾದುಕೆಗಳನ್ನು, ಗೃಹೀತ್ವಾ=ತೆಗೆದುಕೊಂಡು, ನಂದಿಗ್ರಾಮೇ=ನಂದಿಗ್ರಾಮವೆನ್ನುವ ಹಳ್ಳಿಯಲ್ಲಿ, ಸ್ಥಿತಃ ಸನ್=ಇದ್ದುಕೊಂಡು, ತಾಭ್ಯಾಂ=ಆ ಪಾದುಕೆಗಳ ಮೂಲಕವಾಗಿ, ವಸುಂಧರಾಂ=ಭೂಮಿಯನ್ನು, ರರಕ್ಷ=**ಕಾಪಾಡಿದನು.**

ದುಃಖದಿಂದ ಕೂಡಿದ ಭರತನು ರಾಮನಿಂದ ಪಾದುಕೆಗಳನ್ನು ಸ್ವೀಕರಿಸಿ, ನಂದಿಗ್ರಾಮವೆನ್ನುವ ಜಾಗದಲ್ಲಿ ಇದ್ದುಕೊಂಡು ಆ ಪಾದುಕೆಗಳ ಮೂಲಕ ಭೂಮಿಯನ್ನು ಕಾಪಾಡಿದನು.

**ರಾಘವಸ್ತು ಗಿರೇಸ್ತಸ್ಮಾದ್ ಗತ್ವಾಽತ್ರಿಂ ಸಮವಂದತ ।**
**ತತ್ಪತ್ನೀತು ತದಾಸೀತಾಂ ಭೂಷಣೈಃ ಸ್ವೈರ ಭೂಷಯತ್ ॥ ೧೯ ॥**

ರಾಘವಃ ತು = ರಾಮನಾದರೋ, ತಸ್ಮಾತ್ = ಆ ಯಾವ, ಗಿರೇಃ = ಬೆಟ್ಟದ ಪ್ರಾಂತದಿಂದ, ಗತ್ವಾ = ಹೊರಟು, ಅತ್ರಿಂ = ಅತ್ರಿ ಮುನಿಗಳನ್ನು, ಸಮವಂದತ = ನಮಸ್ಕರಿಸಿದನು. ತತ್ಪತ್ನೀ ತು = ಅವರ ಪತ್ನಿಯಾದ ಅನುಸೂಯೆಯಾದರೋ, ತದಾ = ಆಗ, ಸ್ವೈಃ ಭೂಷಣೈಃ = ತನ್ನ ಆಭರಣಗಳಿಂದ, ಸೀತಾಂ = ಸೀತೆಯನ್ನು, ಅಭೂಷಯತ್ = ಅಲಂಕರಿಸಿದಳು.

ರಾಮನು ಆ ಗಿರಿಪ್ರಾಂತ್ಯದಿಂದ ಹೊರಟು ಅತ್ರಿಮುನಿಗಳನ್ನು ಸಂದರ್ಶಿಸಿ ನಮಸ್ಕರಿಸಿದನು. ಅವರ ಪತ್ನಿ ಅನುಸೂಯೆಯು ತನ್ನ ಆಭರಣಗಳಿಂದ ಸೀತೆಯನ್ನು ಅಲಂಕರಿಸಿದಳು.

**ಉಷಿತ್ವಾತು ನಿಶಾಮೇಕಾಂ ಆಶ್ರಮೇ ತಸ್ಯ ರಾಘವಃ ।**
**ವಿವೇಶ ದಂಡಕಾರಣ್ಯಂ ಸೀತಾಲಕ್ಷ್ಮಣ ಸಂಯುತಃ ॥ ೨೦ ॥**

ರಾಘವಃ = ರಾಮಚಂದ್ರನು, ತಸ್ಯ = ಅವರ, ಆಶ್ರಮೇ = ಆಶ್ರಮದಲ್ಲಿ, ಏಕಾಂ = ಒಂದು, ನಿಶಾಂ = ರಾತ್ರಿಯನ್ನು, ಉಷಿತ್ವಾ = ಕಳೆದು, ಸೀತಾಲಕ್ಷ್ಮಣ ಸಂಯುತಃ = ಸೀತಾ ಮತ್ತು ಲಕ್ಷ್ಮಣರ ಸಮೇತನಾಗಿ, ದಂಡಕಾರಣ್ಯಂ = ದಂಡಕಾರಣ್ಯ ಎಂಬ ಕಾಡನ್ನು, ವಿವೇಶ = ಪ್ರವೇಶಿಸಿದನು.

ರಾಮಚಂದ್ರನು ಅವರ ಆಶ್ರಮದಲ್ಲಿ ಒಂದು ರಾತ್ರಿಯನ್ನು ಕಳೆದು ಸೀತಾಲಕ್ಷ್ಮಣರೊಡನೆ ದಂಡಕಾರಣ್ಯವನ್ನು ಪ್ರವೇಶಿಸಿದನು.

**ಇತಿ ಅಯೋಧ್ಯಾಕಾಂಡಃ**

ಅಯೋಧ್ಯಾಕಾಂಡವು ಮುಗಿಯಿತು

## ಅಥ ಅರಣ್ಯಕಾಂಡಃ

### ಅರಣ್ಯಕಾಂಡ

**ವ್ರಜನ್ ವನೇನ ಕಾಕುಸ್ಥಃ ವಿರಾಧಂ ವಿಧಿಚೋದಿತಂ ।**
**ಸದಾರಾನುಜಮಾತ್ಮಾನಂ ಹರಂತಮವಧೀತ್ ತದಾ ॥ ೧ ॥**

ತದಾ = ಆ ಸಂದರ್ಭದಲ್ಲಿ, ವನೇನ = ಕಾಡಿನಲ್ಲಿ, ವ್ರಜನ್ = ಹೋಗುತ್ತಿದ್ದ, ಕಾಕುಸ್ಥಃ = ರಾಮಚಂದ್ರನು, ಸದಾರ ಅನುಜಂ = ಹೆಂಡತಿ ಮತ್ತು ತಮ್ಮಂದಿ ಸಮೇತನಾದ, ಆತ್ಮಾನಂ = ತನ್ನನ್ನು, ಹರಂತಂ = ಕೊಲ್ಲಲು, ವಿಧಿಚೋದಿತಂ = ವಿಧಿಯಿಂದ ಪ್ರೇರೇಪಿಸಲ್ಪಟ್ಟ, ವಿರಾಧಂ = ವಿರಾಧನನ್ನು, ಅವಧೀತ್ = ಸಂಹರಿಸಿದನು.

ಆ ಸಂದರ್ಭದಲ್ಲಿ ಕಾಡಿನಲ್ಲಿ ಹೋಗುತ್ತಿದ್ದ ರಾಮಚಂದ್ರನು ಹೆಂಡತಿ ಮತ್ತು ಸಹೋದರ ಸಮೇತನಾದ ತನ್ನನ್ನು ಕೊಲ್ಲಲು ವಿಧಿಯಿಂದ ಪ್ರೇರೇಪಿತನಾಗಿ ಬಂ ವಿರಾಧನೆಂಬ ರಾಕ್ಷಸನನ್ನು ಸಂಹಾರ ಮಾಡಿದನು.

**ಶರಭಂಗಾಶ್ರಮಂ ಪ್ರಾಪ್ಯ ಸ್ವರ್ಗತಿಂ ತಸ್ಯ ವೀಕ್ಷ್ಯ ಸಃ ।**
**ಪ್ರತಿಜಜ್ಞೇ ರಾಕ್ಷಸಾನಾಂ ವಧಂ ಮುನಿಭಿರರ್ಥಿತಃ ॥ ೨**

ಸಃ = ಆ ರಾಮನು, ಶರಭಂಗಾಶ್ರಮಂ = ಶರಭಂಗ ಋಷಿಯ ಆಶ್ರಮವನ್ನು ಪ್ರಾಪ್ಯ = ಸೇರಿ, ತಸ್ಯ = ಆ ಮುನಿಯ, ಸ್ವರ್ಗತಿಂ = ಸ್ವರ್ಗಪ್ರಯಾಣವನ್ನು ವೀಕ್ಷ್ಯ = ನೋಡಿ, ಮುನಿಭಿಃ = ಮುನಿವರರುಗಳಿಂದ, ಅರ್ಥಿತಃ = ಪ್ರಾರ್ಥಿಸಲ್ಪಟ್ಟ ನಾಗಿ, ರಾಕ್ಷಸಾನಾಂ = ರಾಕ್ಷಸರ, ವಧಂ = ವಧೆಯನ್ನು (ಮಾಡಲು), ಪ್ರತಿಜಜ್ಞೇ = ಪ್ರತಿಜ್ಞೆಯನ್ನು ಮಾಡಿದನು.

ಆ ರಾಮನು ಶರಭಂಗಾಶ್ರಮವನ್ನು ಸೇರಿ ಆ ಮುನಿಯು ಸ್ವರ್ಗಕ್ಕೆ ಪ್ರಯಾ ಮಾಡುತ್ತಿರುವುದನ್ನು ವೀಕ್ಷಿಸಿ ಮತ್ತೆ ಋಷಿಶ್ರೇಷ್ಠರುಗಳಿಂದ ಪ್ರಾರ್ಥಿಸಲ್ಪಟ ರಾಕ್ಷಸರನ್ನು ಕೊಲ್ಲಲು ಬದ್ಧಕಂಕಣನಾದನು.

**ತಸ್ಮಾದ್ ಗತ್ವಾ ಸುತೀಕ್ಷ್ಣಂಚ ಪ್ರಣಮ್ಯಾನೇನ ಪೂಜಿತಃ ।**
**ಅಗಸ್ತ್ಯಸ್ಯಾಶ್ರಮಂ ಪ್ರಾಪ್ಯ ತಂ ನನಾಮ ರಘೂತ್ತಮಃ ॥ ೩**

ರಘೂತ್ತಮಃ = ರಘುಶ್ರೇಷ್ಠನಾದ ರಾಮನು, ತಸ್ಮಾತ್ = ಅಲ್ಲಿಂದ, ಗತ್ವಾ = ಹೊರಟು, ಸುತೀಕ್ಷ್ಣಂ = ಸುತೀಕ್ಷ್ಣರೆಂಬ ಮುನಿಗಳನ್ನು, ಪ್ರಣಮ್ಯ = ನಮಸ್ಕರಿ ಅನೇನ = ಅವರಿಂದ, ಪೂಜಿತಃ = ಪೂಜಿಸಲ್ಪಟ್ಟು, ಅಗಸ್ತ್ಯಸ್ಯ = ಅಗಸ್ತ್ಯ

ಆಶ್ರಮಂ = ಆಶ್ರಮವನ್ನು, ಪ್ರಾಪ್ಯ = ಸೇರಿ, ತಂ ನನಾಮ = ಅವರನ್ನು ನಮಸ್ಕರಿಸಿದನು.

ರಾಮಚಂದ್ರನು ಅಲ್ಲಿಂದ ಹೊರಟು ಸುತೀಕ್ಷ್ಣರನ್ನು ವಂದಿಸಿ ಅವರಿಂದ ಪೂಜಿಸಲ್ಪಟ್ಟು ಅಗಸ್ತ್ಯರ ಆಶ್ರಮವನ್ನು ಸೇರಿ ಅವರನ್ನು ಅಭಿವಂದಿಸಿದನು.

**ರಾಮಾಯ ವೈಷ್ಣವಂ ಚಾಪಂ ಐಂದ್ರಂ ತೂಣೀಯುಗಂ ತಥಾ ।**
**ಬ್ರಾಹ್ಮಮಸ್ತ್ರಂ ಚ ಖಡ್ಗಂ ಚ ಪ್ರಪದೌ ಕುಂಭ ಸಂಭವಃ ॥ ೪ ॥**

ಕುಂಭಸಂಭವಃ = ಕೊಡದಲ್ಲಿ ಹುಟ್ಟಿದ ಅಗಸ್ತ್ಯರು, ರಾಮಾಯ = ರಾಮನಿಗೆ ವೈಷ್ಣವಂ = ವಿಷ್ಣುವನ್ನು ಅಧಿದೇವತೆಯನ್ನಾಗಿ ಉಳ್ಳ, ಚಾಪಂ = ಬಿಲ್ಲನ್ನು, ತಥಾ = ಹಾಗೆಯೇ, ಐಂದ್ರಂ = ಇಂದ್ರನೇ ದೇವತೆಯಾಗಿ ಉಳ್ಳ, ತೂಣೀಯುಗಂ = ಎರಡು ಬತ್ತಳಿಕೆಗಳನ್ನು, ಬ್ರಾಹ್ಮಂ = ಬ್ರಹ್ಮನೇ ಅಧಿದೇವತೆಯಾಗಿ ಉಳ್ಳ, ಅಸ್ತ್ರಂ ಚ = ಅಸ್ತ್ರವನ್ನೂ, ಖಡ್ಗಂ ಚ = ಕತ್ತಿಯನ್ನೂ ಕೂಡ, ಪ್ರದದೌ = ಕೊಟ್ಟರು.

ಅಗಸ್ತ್ಯರು ವಿಷ್ಣುವನ್ನು ಅಧಿದೇವತೆಯಾಗಿ ಉಳ್ಳ ಬಿಲ್ಲನ್ನೂ, ಇಂದ್ರನು ಅಧಿದೇವತೆಯಾಗಿ ಉಳ್ಳ ಎರಡು ಬತ್ತಳಿಕೆಗಳನ್ನೂ ಮತ್ತು ಬ್ರಹ್ಮನೇ ಅಧಿದೇವತೆಯಾಗಿ ಉಳ್ಳ ಅಸ್ತ್ರವನ್ನೂ ಮತ್ತು ಕತ್ತಿಯನ್ನೂ ಸಹ ನೀಡಿದರು.

**ತತ ಸ್ಸ ಗಚ್ಛನ್ ಕಾಕುಸ್ಥಃ ಸಮಾಗಮ್ಯ ಜಟಾಯುಷಂ ।**
**ವೈದೇಹ್ಯಾಃ ಪಾಲನಾಯೈನಂ ಶ್ರದ್ಧದೇ ಪಿತೃವಲ್ಲಭಂ ॥ ೫ ॥**

ತತಃ = ಅನಂತರ, ಸಃ = ಆ, ಕಾಕುಸ್ಥಃ = ರಾಮನು, ಗಚ್ಛನ್ = ಹೋಗುವಾಗ, ಜಟಾಯುಷಂ = ಜಟಾಯುವನ್ನು, ಸಮಾಗಮ್ಯ = ಸಂಧಿಸಿ, ವೈದೇಹ್ಯಾಃ = ಸೀತೆಯ, ಪಾಲನಾಯ = ರಕ್ಷಣೆಗೆಂದು, ಪಿತೃವಲ್ಲಭಂ = ತಂದೆಯ ಗೆಳೆಯನಾದ, ಏನಂ = ಅತನನ್ನು, ಶ್ರದ್ಧದೇ = ವಿಶ್ವಾಸಪೂರ್ವಕವಾಗಿ ಪ್ರಾರ್ಥಿಸಿದನು.

ನಂತರ ಆ ಕಾಕುಸ್ಥನಾದ ರಾಮನು ಹೋಗುವಾಗ ದಾರಿಯಲ್ಲಿ ಜಟಾಯುವನ್ನು ಸಂಧಿಸಿ ಸೀತೆಯ ರಕ್ಷಣೆಗೆಂದು ತಂದೆಯ ಗೆಳೆಯನಾದ ಅತನನ್ನು ವಿಶ್ವಾಸಪೂರ್ವಕವಾಗಿ ಪ್ರಾರ್ಥಿಸಿದನು.

**ತತಃ ಪಂಚವಟೀಂ ಪ್ರಾಪ್ಯ ತತ್ರ ಲಕ್ಷ್ಮಣ ನಿರ್ಮಿತಾಂ ।**
**ಪರ್ಣ ಶಾಲಾ ಮಧ್ಯುವಾಸ ಸೀತಯಾ ಸಹಿತಸ್ಸುಖಂ ॥ ೬ ॥**

ತತಃ = ನಂತರ, ಪಂಚವಟೀಂ = ಪಂಚವಟಿ ಎಂಬ ಸ್ಥಳವನ್ನು, ಪ್ರಾಪ್ಯ = ತಲುಪಿ, ತತ್ರ = ಅಲ್ಲಿ, ಲಕ್ಷ್ಮಣ ನಿರ್ಮಿತಾಂ = ಲಕ್ಷ್ಮಣನಿಂದ ಕಟ್ಟಲ್ಪಟ್ಟ, ಪರ್ಣ-ಶಾಲಾಂ = ಪರ್ಣಶಾಲೆಯಲ್ಲಿ, ಸೀತಯಾ ಸಹಿತಃ = ಸೀತೆಯ ಜೊತೆ, ಸುಖಂ = ಸುಖವಾಗಿ, ಅಧ್ಯುವಾಸ = ವಾಸಿಸಿದನು.

ನಂತರ ಪಂಚವಟಿಯನ್ನು ಸೇರಿ ಅಲ್ಲಿ ಲಕ್ಷ್ಮಣನಿಂದ ನಿರ್ಮಿಸಲ್ಪಟ್ಟ ಪರ್ಣಶಾಲೆಯಲ್ಲಿ ಸೀತೆಯೊಡನೆ ಸುಖವಾಗಿ ವಾಸಮಾಡಿದನು.

**ತತ್ರಾಭ್ಯೇತ್ಯೈಕದಾರಾಮಂ ವವ್ರೇ ಶೂರ್ಪನಖಾಽಭಿಕಾ ।**
**ತನ್ನಿರಸ್ತಾ ಲಕ್ಷ್ಮಣಂ ಸಾ ವವ್ರೇ ಸೋಽಪಿ ನಿರಾಕರೋತ್** ॥ ೭ ॥

ಏತದಾ = ಒಂದುಸಲ, ಶೂರ್ಪನಖಾ = ಶೂರ್ಪನಖಿಯೆಂಬ ರಾಕ್ಷಸಿಯು, ಅಭಿಕಾಸತಿ = ಕಾಮದಿಂದ ಕೂಡಿ, ತತ್ರ = ಅಲ್ಲಿಗೆ, ಅಭ್ಯೇತ್ಯ = ಬಂದು, ರಾಮಂ = ರಾಮನನ್ನು, ವವ್ರೇ = ಬೇಡಿದವಳಾಗಿ, ತನ್ನಿರಸ್ತಾಸತಿ = ಅವನಿಂದ ತಿರಸ್ಕರಿಸಲ್ಪಟ್ಟು, ಸಾ = ಆ ಶೂರ್ಪನಖಿಯು, ಲಕ್ಷ್ಮಣಂ ಚ = ಲಕ್ಷ್ಮಣನನ್ನೂ ಕೂಡ, ವವ್ರೇ = ಬೇಡಿದಳು, ಸಃ ಅಪಿ = ಅವನೂ ಕೂಡ, ನಿರಾಕರೋತ್ = ತಿರಸ್ಕರಿಸಿದನು.

ಒಮ್ಮೆ ಶೂರ್ಪನಖಿಯೆಂಬ ರಾಕ್ಷಸಿಯು ಕಾಮವಶಳಾಗಿ ಅಲ್ಲಿಗೆ ಬಂದು ರಾಮನನ್ನು ಬೇಡಿ ಅವನಿಂದ ತಿರಸ್ಕರಿಸಲ್ಪಟ್ಟು ಲಕ್ಷ್ಮಣನನ್ನೂ ಸಹ ಬೇಡಿದಳು. ಅವನೂ ಸಹ ಅವಳನ್ನು ತಿರಸ್ಕರಿಸಿದನು.

**ರಾಮಮೇವ ತತೋ ವವ್ರೇ ಕಾಮಾತುರಾ ಕಾಮ ಸನ್ನಿಭಂ ।**
**ಪುನಶ್ಚ ಧಿಕ್ಕೃತಾ ತೇನ ಸೀತಾಮಭ್ಯ ದ್ರವದ್ರುಷಾ** ॥ ೮ ॥

ತತಃ = ಅನಂತರ, ಕಾಮಾತುರಾ = ಕಾಮದಿಂದ ದೀನಳಾದ ಶೂರ್ಪನಖಿಯು, ಕಾಮಸನ್ನಿಭಂ = ಮನ್ಮಥ ಸದೃಶನಾದ, ರಾಮಂ ಏವ = ರಾಮನನ್ನೇ, ವವ್ರೇ = ಬೇಡಿದಳು (ಆಶಿಸಿದಳು). ಪುನಃ ಚ = ಮತ್ತೆಯೂ ಸಹ, ತೇನ = ಅವನಿಂದ, ಧಿಕ್ಕೃತಾ = ತಿರಸ್ಕರಿಸಲ್ಪಟ್ಟವಳಾಗಿ, ರುಷಾಂ = ಕೋಪದಿಂದ, ಸೀತಾಂ = ಸೀತೆಯನ್ನು, ಅಭ್ಯದ್ರವಾತ್ = ತಿನ್ನಲು ಧಾವಿಸಿದಳು

ಆಗ ಕಾಮದಿಂದ ಕಂಗೆಟ್ಟ ಶೂರ್ಪನಖಿಯು ಮನ್ಮಥನಂತೆ ಸುಂದರನಾದ ರಾಮನನ್ನೇ ಪುನಃ ಆಶಿಸಿಬಂದಳು. ಪುನಃ ಅವನಿಂದ ತಿರಸ್ಕೃತಳಾಗಿ ಕೋಪದಿಂದ ಸೀತೆಯನ್ನು ತಿನ್ನಲು ಧಾವಿಸಿದಳು.

**ಲಕ್ಷ್ಮಣೇನ ತದಾರೋಷಾತ್ ಕೃತ್ತಶ್ರವಣ ನಾಸಿಕಾ ।**
**ಸಾತು ಗತ್ವಾ ಜನಸ್ಥಾನಂ ಖರಾಯೈವ ನ್ಯವೇದಯತ್ ॥ ೯ ॥**

ತದಾ = ಆಗ, ಲಕ್ಷ್ಮಣೇನ = ಲಕ್ಷ್ಮಣನಿಂದ, ರೋಷಾತ್ = ಕೋಪದಿಂದ, ಕೃತ್ತಶ್ರವಣ ನಾಸಿಕಾ = ಕತ್ತರಿಸಲ್ಪಟ್ಟ ಕಿವಿ ಮತ್ತು ಮೂಗುಗಳನ್ನುಳ್ಳವಳಾಗಿ, ಸಾ = ಆಕೆಯು, ಜನಸ್ಥಾನಂ = ಜನಸ್ಥಾನವನ್ನು, ಗತ್ವಾ = ಸೇರಿ, ಖರಾಯ = ಖರ ಎಂಬ ರಾಕ್ಷಸನಿಗೆ, ಏತದ್ = ಈ ವಿಚಾರವನ್ನು, ನ್ಯವೇದಯತ್ = ನಿವೇದಿಸಿದಳು.

ಆಗ ಲಕ್ಷ್ಮಣನಿಂದ ಕೋಪದಿಂದ ಕತ್ತರಿಸಲ್ಪಟ್ಟ ಕಿವಿ ಮೂಗುಗಳನ್ನು ಉಳ್ಳವಳಾದ ಶೂರ್ಪಣಖೆಯು ಜನಸ್ಥಾನವೆಂಬ ಸ್ಥಳವನ್ನು ಸೇರಿ ಖರನೆಂಬ ರಾಕ್ಷಸನಿಗೆ ಈ ವಿಚಾರವನ್ನು ವಿವರಿಸಿದಳು.

**ತದಾಕರ್ಣ್ಯ ಖರಃ ಕ್ರುದ್ಧಃ ರಾಘವಂ ಹಂತುಮಾಯಯೌ ।**
**ದೂಷಣ ತ್ರಿಶಿರೋಮುಖ್ಯೈಃ ಯಾತುಧಾನೈಃ ಸಮನ್ವಿತಃ ॥ ೧೦ ॥**

ತತ್ = ಅದನ್ನು, ಆಕರ್ಣ್ಯ = ಕೇಳಿ, ಕ್ರುದ್ಧಃ = ಕೋಪಗೊಂಡ, ಖರಃ = ಖರನು, ದೂಷಣ ತ್ರಿಶಿರೋಮುಖ್ಯೈಃ = ದೂಷಣ ಮತ್ತು ತ್ರಿಶಿರಸ್ಸು ಮುಂತಾದ ಪ್ರಮುಖ, ಯಾತುಧಾನೈಃ = ರಾಕ್ಷಸರಿಂದ, ಸಮನ್ವಿತಃ = ಒಡಗೊಂಡು, ರಾಘವಂ = ರಾಮನನ್ನು, ಹಂತುಂ = ಕೊಲ್ಲಲು, ಆಯಯೌ = ಬಂದನು.

ಅದನ್ನು ಕೇಳಿ ಕೋಪಗೊಂಡ ಖರನು ದೂಷಣ ಮತ್ತು ತ್ರಿಶಿರಸ್ಸು ಮುಂತಾದ ರಾಕ್ಷಸಪ್ರಮುಖರನ್ನೊಡಗೊಂಡು ರಾಮನನ್ನು ಕೊಲ್ಲಲು ಬಂದನು.

**ತತ್ ಕ್ಷಣಂ ಲಕ್ಷ್ಮಣೇ ಸೀತಾಂ ನಿಧಾಯ ರಘುನಂದನಃ ।**
**ಖರಂ ಸಹಾನುಗಂ ಸಂಖ್ಯೇ ಜಘಾನ ಲಘುವಿಕ್ರಮಃ ॥ ೧೧ ॥**

ರಘುನಂದನಃ = ರಘುವಂಶದ ಕುಮಾರನಾದ ರಾಮಚಂದ್ರನು, ತತ್ ಕ್ಷಣಂ = ಆ ಕ್ಷಣವೇ, ಲಕ್ಷ್ಮಣೇ = ಲಕ್ಷ್ಮಣನಿಗೆ, ಸೀತಾಂ = ಸೀತೆಯನ್ನು, ನಿಧಾಯ = ನೋಡಿಕೊಳ್ಳಲು ಒಪ್ಪಿಸಿ, ಸಹಾನುಗಂ = ಹಿಂಬಾಲಕರನ್ನು ಒಳಗೊಂಡ, ಖರಂ = ಖರನನ್ನು ಸಂಖ್ಯೇ = ಯುದ್ಧದಲ್ಲಿ, ಲಘುವಿಕ್ರಮಸನ್ = ಕೇವಲ ಅಲ್ಪವಾದ ಪರಾಕ್ರಮದಿಂದಲೇ, ಜಘಾನ = ಸಂಹರಿಸಿದನು.

ರಘುರಾಮನಾದರೋ ಆ ಕ್ಷಣವೇ ಲಕ್ಷ್ಮಣನಿಗೆ ಸೀತೆಯನ್ನು ನೋಡಿಕೊಳ್ಳಲು ಹೇಳಿ ಸೈನ್ಯದಿಂದ ಒಡಗೂಡಿ ಬಂದ ಖರನನ್ನು ಯುದ್ಧದಲ್ಲಿ ಕೇವಲ ಅಲ್ಪವಾದ ಪರಾಕ್ರಮದಿಂದಲೇ ಸಂಹಾರ ಮಾಡಿದನು.

**ತತಃ ಶೂರ್ಪನಖಾ ಗತ್ವಾ ಲಂಕಾಂ ಶೋಕಸಮನ್ವಿತಾ ।**
**ನ್ಯವೇದಯದ್ರಾವಣಾಯ ವೃತ್ತಾಂತಂ ಸರ್ವಮಾದಿತಃ** ॥ ೧೨ ॥

ತತಃ = ನಂತರ, ಶೂರ್ಪನಖಾ = ಶೂರ್ಪನಖಿಯು, ಶೋಕ ಸಮನ್ವಿತಾ = ಶೋಕದಿಂದ ಒಡಗೂಡಿ, ಲಂಕಾಂ = ಲಂಕೆಯನ್ನು, ಗತ್ವಾ = ಸೇರಿ, ಸರ್ವಂ = ಎಲ್ಲಾ ವೃತ್ತಾಂತಂ = ವಿಚಾರಗಳನ್ನೂ, ಆದಿತಃ = ಮೊದಲಿನಿಂದ, ನ್ಯವೇದಯತ್ = ಹೇಳಿದಳು.

ನಂತರ ಶೂರ್ಪನಖಿಯು ಶೋಕಸಂತಪ್ತಳಾಗಿ ಲಂಕೆಯನ್ನು ಸೇರಿ ರಾವಣನಿಗೆ ಎಲ್ಲಾ ವೃತ್ತಾಂತವನ್ನೂ ಮೊದಲಿನಿಂದ ತಿಳಿಸಿದಳು.

**ತಚ್ಛ್ರುತ್ವಾ ರಾವಣಃ ಸೀತಾಂ ಹರ್ತುಂ ಕೃತಮತಿಸ್ತದಾ ॥**
**ಮಾರೀಚಸ್ಯಾಶ್ರಮಂ ಪ್ರಾಪ್ಯ ಸಹಾಯ್ಯೇ ತಮಚೋದಯತ್** ॥ ೧೩ ॥

ರಾವಣಃ = ರಾವಣನು, ತಚ್ಛ್ರುತ್ವಾ = ಅದನ್ನು ಕೇಳಿ, ತದಾ = ಆಗಲೇ, ಸೀತಾಂ = ಸೀತೆಯನ್ನು, ಹರ್ತುಂ = ಅಪಹರಿಸಲು, ಕೃತಮತಿಃ = ತೀರ್ಮಾನಿಸಿದ ಬುದ್ಧಿಯಿಂದ, ಮಾರೀಚಸ್ಯ = ಮಾರೀಚನ, ಆಶ್ರಮಂ = ಆಶ್ರಮವನ್ನು, ಪ್ರಾಪ್ಯ = ಸೇರಿ, ತಂ = ಅವನನ್ನು, ಸಾಹಾಯ್ಯೇ = ಸಹಾಯಕ್ಕೋಸ್ಕರ, ಅಚೋದಯತ್ = ಪ್ರಚೋದಿಸಿದನು.

ರಾವಣನಾದರೋ ಅದನ್ನು ಆಲಿಸಿ ಆಗಲೇ ಸೀತೆಯನ್ನು ಅಪಹರಿಸಲು ತೀರ್ಮಾನಿಸಿ ಮಾರೀಚನ ಆಶ್ರಮವನ್ನು ಸೇರಿ ತನಗೆ ಸಹಾಯಮಾಡಲು ಪ್ರೇರೇಪಿಸಿದನು.

**ಸೋಽಪಿ ಹೇಮ ಮೃಗೋ ಭೂತ್ವಾ ಸೀತಾಯಾಃ ಪ್ರಮುಖೇಽಚರತ್ ।**
**ಸಾ ತು ತಂ ಮೃಗಮಾಹರ್ತುಂ ಭರ್ತಾರಂ ಸಮಯಾಚತ** ॥ ೧೪ ॥

ಸಃ ಅಪಿ = ಮಾರೀಚನೂ ಕೂಡ, ಹೇಮ ಮೃಗಃ = ಚಿನ್ನದ ಜಿಂಕೆಯ ರೂಪ ವುಳ್ಳವನು, ಭೂತ್ವಾ = ಆಗಿ, ಸೀತಾಯಾಃ = ಸೀತೆಯ, ಪ್ರಮುಖೇ = ಮುಂಗಡೆ, ಅಚರತ್ = ಸಂಚರಿಸಿದನು. ಸಾ ತು = ಅವಳೂ ಕೂಡ, ತಂ = ಆ, ಮೃಗಂ = ಜಿಂಕೆಯನ್ನು, ಆಹರ್ತುಂ = ತಂದುಕೊಡಲು, ಭರ್ತಾರಂ = ಗಂಡನಾದ ರಾಮಚಂದ್ರ ನನ್ನು, ಸಮಯಾಚತ = ಬೇಡಿದಳು.

ಮಾರೀಚನೂ ಕೂಡ ಚಿನ್ನದ ಮೃಗವಾಗಿ ಆ ಸೀತೆಯ ಮುಂದೆ ಸುಳಿದಾಡಿ

ದನು. ಆಕೆಯೂ ಕೂಡ ಆ ಜಿಂಕೆಯನ್ನು ತಂದುಕೊಡಬೇಕೆಂಬುದಾಗಿ ಪತಿಯಾದ ರಾಮಚಂದ್ರನನ್ನು ಬೇಡಿಕೊಂಡಳು.

**ನಿಯುಜ್ಯ ಲಕ್ಷ್ಮಣಂ ಸೀತಾಂ ರಕ್ಷಿತುಂ ರಘುನಂದನಃ ।**
**ಅನ್ವಗಚ್ಛನ್ಮೃಗಂ ತೂರ್ಣಂ ದ್ರವಂತಂ ಕಾನನಾಂತರೇ ॥ ೧೫ ॥**

ರಘುನಂದನಃ = ರಾಮನು, ಸೀತಾಂ = ಸೀತೆಯನ್ನು, ರಕ್ಷಿತುಂ = ರಕ್ಷಿಸಲು, ಲಕ್ಷ್ಮಣಂ = ಲಕ್ಷ್ಮಣನನ್ನು, ನಿಯುಜ್ಯ = ನಿಯೋಜಿಸಿ, ಕಾನನಾಂತರೇ = ಕಾಡಿನೊಳಗಡೆ, ತೂರ್ಣಂ = ವೇಗವಾಗಿ, ದ್ರವಂತಂ = ಓಡುತ್ತಿರುವ, ಮೃಗಂ = ಜಿಂಕೆಯನ್ನು, ಅನ್ವಗಚ್ಛತ್ = ಹಿಂಬಾಲಿಸಿದನು.

ರಾಮನು ಸೀತೆಯನ್ನು ರಕ್ಷಿಸಲು ಲಕ್ಷ್ಮಣನನ್ನು ನಿಯೋಜಿಸಿ ಕಾಡಿನೊಳಗೆ ವೇಗವಾಗಿ ಓಡುತ್ತಿದ್ದ ಜಿಂಕೆಯನ್ನು ಹಿಡಿಯಲು ಹಿಂಬಾಲಿಸಿದನು.

**ವಿವ್ಯಾಧ ಚ ಮೃಗಂ ರಾಮಃ ಸ ನಿಜಂ ರೂಪಮಸ್ಥಿತಃ ।**
**“ಹಾ ! ಸೀತೇ ! ಲಕ್ಷ್ಮಣೇ”ತ್ಯೇವಂ ರುದನ್ ಪ್ರಾಣಾನ್**
**ಸಮುತ್ಯಜತ್ ॥ ೧೬ ॥**

ರಾಮಃ = ರಾಮನು, ಮೃಗಂ = ಜಿಂಕೆಯನ್ನು, ವಿವ್ಯಾಧ = ಬಾಣದಿಂದ ಹೊಡೆದನು. ಸಃ ಚ = ಆ ಜಿಂಕೆಯಾದರೋ, ನಿಜಂ = ತನ್ನ, ರೂಪಂ = ರೂಪವನ್ನು, ಆಸ್ಥಿತಃ = ಹೊಂದಿ, ಹಾ ಸೀತೇ = ಅಯ್ಯೋ ಸೀತೆಯೇ, ಲಕ್ಷ್ಮಣಾ = ಲಕ್ಷ್ಮಣನೇ, ಇತಿ ಏವಂ = ಈ ರೀತಿಯಾಗಿ, ರುದನ್ = ಪ್ರಲಾಪಿಸುತ್ತಾ, ಪ್ರಾಣಾನ್ = ಪ್ರಾಣಗಳನ್ನು, ಸಮುತ್ಯಜಿತ್ = ಬಿಟ್ಟಿತು.

ರಾಮಚಂದ್ರನು ಜಿಂಕೆಯನ್ನು ಬಾಣದಿಂದ ಹೊಡೆಯಲು ಆ ಜಿಂಕೆಯು ತನ್ನ ನಿಜವಾದ ರೂಪವನ್ನು ಹೊಂದಿ “ಅಯ್ಯೋ ಸೀತೆ ! ಲಕ್ಷ್ಮಣಾ” ಎಂಬುದಾಗಿ ಪ್ರಲಾಪ ಮಾಡುತ್ತಾ ಪ್ರಾಣ ಬಿಟ್ಟಿತು.

**ಏತದಾಕರ್ಣ್ಯ ವೈದೇಹ್ಯಾ ಲಕ್ಷ್ಮಣಶ್ಚೋದಿತೋ ಭೃಶಂ ।**
**ತದ್ರಕ್ಷಾಂ ದೇವತಾಃ ಪ್ರಾರ್ಥ್ಯ ಪ್ರಯಯೌ ರಾಘವಾಂತಿಕಂ ॥ ೧೭ ॥**

ಏತತ್ = ಇದನ್ನು, ಆಕರ್ಣ್ಯ = ಕೇಳಿ, ವೈದೇಹ್ಯಾ = ಸೀತೆಯಿಂದ, ಭೃಶಂ = ಬಹಳವಾಗಿ, ಚೋದಿತಃ = ಬಲಾತ್ಕರಿಸಲ್ಪಟ್ಟ, ಲಕ್ಷ್ಮಣಃ = ಲಕ್ಷ್ಮಣನು, ತದ್ರಕ್ಷಾಂ =

ಆಕೆಯ ರಕ್ಷಣೆಗಾಗಿ, ದೇವತಾಂ = ದೇವತೆಗಳನ್ನು, ಪ್ರಾರ್ಥ್ಯ = ಪ್ರಾರ್ಥಿಸಿ, ರಾಘವಾಂತಿಕಂ = ರಾಮನ ಸಮೀಪಕ್ಕೆ, ಪ್ರಯಯೌ = ಹೊರಟನು.

ಇದನ್ನು ಕೇಳಿ (ಭೀತಳಾದ) ಸೀತೆಯಿಂದ ಬಲಾತ್ಕರಿಸಲ್ಪಟ್ಟ ಲಕ್ಷ್ಮಣನು ಆಕೆಯ ರಕ್ಷಣೆಗಾಗಿ ದೇವತೆಗಳನ್ನು ಪ್ರಾರ್ಥನೆಮಾಡಿ ರಾಮನ ಹತ್ತಿರಕ್ಕೆ ಹೊರಟನು.

**ತದನಂತರಂ ಸಮಾಸಾದ್ಯ ರಾವಣೋ ಯತಿರೂಪಧೃತ್ ।**
**ಸೀತಾಂ ಗೃಹೀತ್ವಾ ಪ್ರಯಯೌ ಗಗನೇನ ತ್ವರಾನ್ವಿತಃ ॥ ೧೮ ॥**

ತತ್ = ಆ, ಅಂತರಂ = ಅವಕಾಶವನ್ನು, ಸಮಾಸಾದ್ಯ = ಸಾಧಿಸಿದ, ಯತಿರೂಪಧೃತ್ = ಸಂನ್ಯಾಸಿಯ ವೇಷವನ್ನು ಧರಿಸಿದ, ರಾವಣಃ = ರಾವಣನು, ಸೀತಾಂ = ಸೀತೆಯನ್ನು, ಗೃಹೀತ್ವಾ = ಎತ್ತಿಕೊಂಡು, ತ್ವರಾನ್ವಿತಃ = ಅವಸರದಿಂದ ಕೂಡಿ, ಗಗನೇನ = ಆಕಾಶಮಾರ್ಗವಾಗಿ, ಪ್ರಯಯೌ = ಹೊರಟನು.

ಈ ಅವಕಾಶವನ್ನು ಸಾಧಿಸಿದ ರಾವಣನು ಸಂನ್ಯಾಸಿ ವೇಷಧಾರಣ ಮಾಡಿಕೊಂಡು ಸೀತೆಯನ್ನು ಎತ್ತಿಕೊಂಡು ತ್ವರೆಯಿಂದ ಆಕಾಶಮಾರ್ಗವಾಗಿ ಹೊರಟನು.

**ತತೋ ಜಟಾಯುರಾಲೋಕ್ಯ ನೀಯಮಾನಾಂತು ಜಾನಕೀಂ ।**
**ಪ್ರಾಹರ ದ್ರಾವಣಂ ಪ್ರಾಪ್ಯ ತುಂಡ ಪಕ್ಷ ನಖೈರ್ಭೃಶಂ ॥ ೧೯ ॥**

ತತಃ = ನಂತರ, ಜಟಾಯುಃ ತು = ಜಟಾಯುವಾದರೋ, ಜಾನಕೀಂ = ಸೀತೆಯನ್ನು, ನೀಯಮಾನಾಂ = ಕೊಂಡೊಯ್ಯುವುದನ್ನು, ಆಲೋಕ್ಯ = ನೋಡಿ, ರಾವಣಂ = ರಾವಣನನ್ನು, ಪ್ರಾಪ್ಯ = ಸೇರಿ, ತುಂಡ ಪಕ್ಷ ನಖೈಃ = ಕೊಕ್ಕು ರೆಕ್ಕೆ ಮತ್ತು ಉಗುರುಗಳಿಂದ, ಭೃಶಂ = ಬಹಳವಾಗಿ, ಪ್ರಾಹರತ್ = ಪ್ರಹರಿಸಿತು.

ಆಗ ಜಟಾಯುವು ಸೀತೆಯನ್ನು ಎತ್ತಿಕೊಂಡು ಹೋಗುತ್ತಿರುವುದನ್ನು ನೋಡಿ ರಾವಣನನ್ನು ಸಮೀಪಿಸಿ ತನ್ನ ಕೊಕ್ಕು, ರೆಕ್ಕೆ ಮತ್ತು ಉಗುರುಗಳಿಂದ ಬಹಳವಾಗಿ ಆತನನ್ನು ಘಾಸಿಪಡಿಸಿತು.

**ಛಿತ್ವೈನಂ ಚಂದ್ರಹಾಸೇನ ಪಾತಯಿತ್ವಾ ಚ ಭೂತಲೇ ।**
**ಗೃಹೀತ್ವಾ ರಾವಣಃ ಸೀತಾಂ ಪ್ರಾವಿಶನ್ನಿಜ ಮಂದಿರಂ ॥ ೨೦ ॥**

ರಾವಣಃ = ರಾವಣನು, ಏನಂ = ಈ ಜಟಾಯುವನ್ನು, ಚಂದ್ರಹಾಸೇನ = ತನ್ನ ಕತ್ತಿಯಾದ ಚಂದ್ರಹಾಸದಿಂದ, ಛಿತ್ವಾ = ಕಡಿದುಹಾಕಿ, ಭೂತಲೇ ಚ = ನೆಲದ ಮೇಲೆ, ಪಾತಯಿತ್ವಾ = ಬೀಳಿಸಿ, ಸೀತಾಂ = ಸೀತೆಯನ್ನು, ಗೃಹೀತ್ವಾ = ಎತ್ತಿಕೊಂಡು, ನಿಜಮಂದಿರಂ = ತನ್ನ ಭವನವನ್ನು, ಪ್ರಾವಿಶತ್ = ಪ್ರವೇಶಿಸಿದನು.

ರಾವಣನು ಜಟಾಯುವನ್ನು ಚಂದ್ರಹಾಸವೆನ್ನುವ ತನ್ನ ಕತ್ತಿಯಿಂದ ಕಡಿದು ನೆಲದಮೇಲೆ ಬೀಳಿಸಿ ಸೀತೆಯನ್ನು ಎತ್ತಿಕೊಂಡು ತನ್ನ ಅರಮನೆಯನ್ನು ಪ್ರವೇಶಿಸಿದನು.

**ಅಶೋಕ ವನಿಕಾ ಮಧ್ಯೇ ಸಂಸ್ಥಾಪ್ಯ ಜನಕಾತ್ಮಜಾಂ ।**
**ರಾವಣೋ ರಕ್ಷಿತುಂ ಚೈನಾಂ ನಿಯುಂಕ್ತೇ ಸ್ಮ ನಿಶಾಚರೀಃ ॥ ೨೧ ॥**

ರಾವಣಃ = ರಾವಣನು, ಅಶೋಕ ವನಿಕಾಂ = ಅಶೋಕ ವನದ, ಮಧ್ಯೇ = ನಡುವೆ, ಜನಕಾತ್ಮಜಾಂ = ಜನಕನ ಮಗಳಾದ ಸೀತೆಯನ್ನು, ಸಂಸ್ಥಾಪ್ಯ = ಇಟ್ಟು, ಏನಾಂ = ಈಕೆಯನ್ನು, ರಕ್ಷಿತುಂ = ನೋಡಿಕೊಳ್ಳುವುದಕ್ಕಾಗಿ, ನಿಶಾಚರೀಃ = ರಾಕ್ಷಸಿಯರನ್ನು ಸಹ, ನಿಯುಂಕ್ತೇಸ್ಮ = ನಿಯಮಿಸಿದನು.

ರಾವಣನು ಸೀತೆಯನ್ನು ಅಶೋಕವನದಲ್ಲಿ ಇಟ್ಟು ಅವಳನ್ನು ನೋಡಿಕೊಳ್ಳಲು ರಾಕ್ಷಸಿಯರನ್ನು ನೇಮಿಸಿದನು.

**ಹತ್ವಾ ರಾಮಸ್ತು ಮಾರೀಚಂ ಆಗಚ್ಛನ್ನನುಜೇರಿತಾಂ ।**
**ವಾರ್ತಾಮಾಕರ್ಣ್ಯ ದುಃಖಾರ್ತಃ ಪರ್ಣಶಾಲಾಮುಪಾಗಮತ್ ॥ ೨೨ ॥**

ರಾಮಃತು = ರಾಮನಾದರೋ, ಮಾರೀಚಂ = ಮಾರೀಚನನ್ನು (ಜಿಂಕೆಯ ವೇಷ ಧರಿಸಿದ ಮಾರೀಚನನ್ನು), ಹತ್ವಾ = ಕೊಂದು, ಆಗಚ್ಛನ್ = ಬರುತ್ತಿರುವಾಗ, ಅನುಜ ಈರಿತಾಂ = ಸೋದರನಿಂದ ಹೇಳಲ್ಪಟ್ಟ, ವಾರ್ತಾಂ = ಸುದ್ದಿಯನ್ನು, ಆಕರ್ಣ್ಯ = ಕೇಳಿ, ದುಃಖಾರ್ತಾಃ = ದುಃಖದಿಂದ ಆರ್ತನಾಗಿ, ಪರ್ಣಶಾಲಾಂ = ಪರ್ಣಶಾಲೆಯನ್ನು, ಉಪಾಗಮತ್ = ಸೇರಿದನು

ರಾಮನಾದರೋ ಮಾರೀಚನನ್ನು ಕೊಂದು ವಾಪಸ್ಸು ಬರುತ್ತಿರಲು ಸೋದರನನ್ನು ಕಂಡು ಅವನಿಂದ ಹೇಳಲ್ಪಟ್ಟ ವಿಚಾರವನ್ನು ಕೇಳಿ ದುಃಖಾರ್ತನಾಗಿ ಪರ್ಣಶಾಲೆಯನ್ನು ಬಂದು ಸೇರಿದನು.

**ಅದೃಷ್ಟ್ವಾ ತತ್ರ ವೈದೇಹೀಂ ವಿಚಿನ್ವಾನೋ ವನಾಂತರೇ ।**
**ಸಹಾನುಜೋ ಗೃಧ್ರರಾಜಂ ಛಿನ್ನ ಪಕ್ಷಂ ದದರ್ಶಸಃ ॥ ೨೩ ॥**

ಸಃ = ಅವನು, ತತ್ರ = ಅಲ್ಲಿ, ವೈದೇಹೀಂ = ಸೀತೆಯನ್ನು, ಅದೃಷ್ಟ್ವಾ = ಕಾಣದೆ, ವನಾಂತರೇ = ಕಾಡಿನೊಳಗೆ, ಸಹಾನುಜಃ = ತಮ್ಮನೊಡನೆ, ವಿಚಿನ್ವಾನಃ = ಹುಡುಕಿಕೊಂಡು, ಛಿನ್ನಪಕ್ಷಂ = ಕತ್ತರಿಸಲ್ಪಟ್ಟ ರೆಕ್ಕೆಯನ್ನುಳ್ಳ, ಗೃಧ್ರರಾಜಂ = ಜಟಾಯುವನ್ನು, ದದರ್ಶ = ನೋಡಿದನು.

ಅವನು ಪರ್ಣಶಾಲೆಯಲ್ಲಿ ಸೀತೆಯನ್ನು ಕಾಣದೆ ಕಾಡಿನೊಳಗಡೆ ತಮ್ಮನೊಡನೆ ಹುಡುಕುತ್ತಾ ಬರುತ್ತಿರಲು ಕತ್ತರಿಸಲ್ಪಟ್ಟ ರೆಕ್ಕೆಯುಳ್ಳ ಪಕ್ಷಿರಾಜ ಜಟಾಯುವನ್ನು ಕಂಡನು.

**ತೇನೋಕ್ತಾಂ ಜಾನಕೀ ವಾರ್ತಾಂ ಶ್ರುತ್ವಾ ಪಶ್ಚಾನ್ಮೃತಂ ಚತಂ ।**
**ದಗ್ಧ್ವಾ ಸಹಾನುಜೋ ರಾಮಃ ಚಕ್ರೇ ತಸ್ಯೋದಕ ಕ್ರಿಯಾಂ ॥ ೨೪ ॥**

ತೇನ = ಆ ಜಟಾಯುವಿನಿಂದ, ಉಕ್ತಾಂ = ಹೇಳಲ್ಪಟ್ಟ, ಜಾನಕೀ ವಾರ್ತಾಂ = ಸೀತೆಯ ವಿಚಾರವನ್ನು, ಶ್ರುತ್ವಾ = ಕೇಳಿ, ಪಶ್ಚಾತ್ = ನಂತರ, ಮೃತಂ = ಸತ್ತು ಹೋದ. ತಂ = ಜಟಾಯುವನ್ನು, ದಗ್ಧ್ವಾ = ದಹನಮಾಡಿ, ಸಹಾನುಜಃ = ತನ್ನ ಸಹೋದರನೊಂದಿಗೆ ಕೂಡಿದ. ರಾಮಃ = ರಾಮಚಂದ್ರನು, ತಸ್ಯ = ಆ ಜಟಾಯುವಿನ, ಉದಕಕ್ರಿಯಾಂ = ಉದಕ ಕ್ರಿಯೆಗಳನ್ನು, ಚಕ್ರೇ = ಮಾಡಿದನು

ಜಟಾಯುವಿನಿಂದ ಹೇಳಲ್ಪಟ್ಟ ಸೀತೆಯ ವೃತ್ತಾಂತವನ್ನು ಕೇಳಿ ಬಳಿಕ ಮೃತಪಟ್ಟ ಜಟಾಯುವನ್ನು ದಹನಮಾಡಿ ಸೋದರನೊಂದಿಗೆ ಆ ಜಟಾವಿನ ಉದಕಕ್ರಿಯೆಗಳನ್ನು ಮಾಡಿದನು.

**ಆತ್ಮನೋಽಭಿ ಭವಂ ಪಶ್ಚಾತ್ ಕುರ್ವಂತೀಂ ಪಥಿ ಲಕ್ಷ್ಮಣಃ ।**
**ಅಯೋ ಮುಖೀಂ ಚಕಾರಾಶು ಕೃತ್ತ ಶ್ರವಣ ನಾಸಿಕಾಂ ॥ ೨೫ ॥**

ಪಶ್ಚಾತ್ = ನಂತರ, ಪಥಿ = ದಾರಿಯಲ್ಲಿ, ಆತ್ಮನಃ = ತನಗೆ, ಅಭಿಭವಂ = ಅವಮಾನವನ್ನು. ಕುರ್ವಂತೀಂ = ಮಾಡುತ್ತಿದ್ದ, ಅಯೋಮುಖೀಂ = ಅಯೋಮುಖಿ ಎನ್ನುವ ರಾಕ್ಷಸಿಯನ್ನು, ಲಕ್ಷ್ಮಣಃ = ಲಕ್ಷ್ಮಣನು, ಆಶು = ಬೇಗನೆ, ಕೃತ್ತ ಶ್ರವಣ ನಾಸಿಕಾಂ = ಕತ್ತರಿಸಲ್ಪಟ್ಟ ಕಿವಿ ಮೂಗುಗಳನ್ನುಳ್ಳವಳನ್ನಾಗಿ, ಚಕಾರ = ಮಾಡಿದನು.

ನಂತರ ಹಾದಿಯಲ್ಲಿ ಲಕ್ಷ್ಮಣನು ತನಗೆ ಅವಮಾನವನ್ನು ಮಾಡಿದ ಅಯೋಮುಖಿ ಎಂಬ ರಾಕ್ಷಸಿಯ ಕಿವಿ ಮೂಗುಗಳನ್ನು ಕತ್ತರಿಸಿ ಹಾಕಿದನು.

**ಗೃಹೀತೌ ತೌ ಕಬಂಧೇನ ಭುಜೌ ತಸ್ಯ ನ್ಯಕೃಂತತಾಂ ।**
**ತತಸ್ತು ಯಾಚಿತೌ ತೇನ ತದ್ದೇಹಂ ದೇಹತಶ್ಚ ತೌ ॥ ೨೬ ॥**

ಕಬಂಧೇನ = ಕಬಂಧನೆಂಬ ರಾಕ್ಷಸನಿಂದ, ಗೃಹೀತೌ = ಹಿಡಿಯಲ್ಪಟ್ಟ, ತೌ = ಅವರಿಬ್ಬರೂ, ತಸ್ಯ = ಅವನ, ಭುಜೌ = ಭುಜಗಳೆರಡನ್ನೂ, ನ್ಯಕೃಂತತಾಂ = ಕಡಿದರು. ತತಃ = ನಂತರ, ತೇನ = ಆ ಕಬಂಧನಿಂದ, ಯಾಚಿತೌ = ಬೇಡಿಕೊಳ್ಳ

ಲ್ಪಟ್ಟ, ತೌ = ಅವರಿಬ್ಬರೂ, ತದ್ದೇಹಂ = ಅವನ ದೇಹವನ್ನು, ದೇಹತುಃ = ದಹನ ಮಾಡಿದರು.

ಕಬಂಧನೆಂಬ ರಾಕ್ಷಸನಿಂದ ಹಿಡಿಯಲ್ಪಟ್ಟ ಅವರಿಬ್ಬರೂ ಅವನ ಭುಜಗಳೆರಡನ್ನೂ ಕಡಿದರು. ನಂತರ ಅವನಿಂದ ಬೇಡಿಕೊಳ್ಳಲ್ಪಟ್ಟ ರೀತಿ ಅವರಿಬ್ಬರೂ ಅವನ ದೇಹವನ್ನು ದಹನ ಮಾಡಿದರು.

**ಸ ತು ದಿವ್ಯಾಕೃತಿರ್ಭೂತ್ವಾ ರಾಮಂ ಸೀತೋಪಲಬ್ಧಯೇ ।**
**ಸುಗ್ರೀವಮೃಶ್ಯಮೂಕಸ್ಥಂ ಯಾಹೀ ತ್ಯುಕ್ತ್ವಾ ದಿವಂ ಯಯೌ ॥ ೨೭ ॥**

ಸ ತು = ಅವನಾದರೋ ದಿವ್ಯ ಆಕೃತಃ = ದಿವ್ಯ ಶರೀರವುಳ್ಳವನು, ಭೂತ್ವಾ= ಆಗಿ, ರಾಮಂ = ರಾಮನನ್ನು (ಕುರಿತು), ಸೀತೋಪಲಬ್ಧಯೇ = ಸೀತೆಯನ್ನು ಹೊಂದುವುದಕ್ಕೋಸ್ಕರವಾಗಿ, ಋಷ್ಯಮೂಕಸ್ಥಂ = ಋಷ್ಯಮೂಕ ಪರ್ವತದಲ್ಲಿ ಇರುವ ಸುಗ್ರೀವಂಪ್ರತಿ = ಸುಗ್ರೀವನನ್ನು ಕುರಿತು, ಯಾಹೀ = ಹೋಗಿರಿ. ಇತಿ ಉಕ್ತ್ವಾ = ಹೀಗೆ ಹೇಳಿ, ದಿವಂ ಯಯೌ = ಸ್ವರ್ಗವನ್ನು ಸೇರಿದನು.

ಕಬಂಧನಾದರೋ ದಿವ್ಯ ದೇಹವನ್ನು ಹೊಂದಿದವನಾಗಿ ರಾಮನನ್ನು ಕುರಿತು " ಸೀತೆಯನ್ನು ಪಡೆಯುವುದಕ್ಕೋಸ್ಕರ ಋಷ್ಯಮೂಕ ಪರ್ವತದಲ್ಲಿರುವ ಸುಗ್ರೀವನ ಬಳಿಗೆ ಹೋಗಿರಿ " ಎಂದು ಹೇಳಿ ಸ್ವರ್ಗಕ್ಕೆ ತೆರಳಿದನು.

**ತತಃ ಪ್ರೀತೋ ರಘುಃ ಶ್ರೇಷ್ಠಃ ಶಬರ್ಯಾಶ್ರಮ ಮಭ್ಯಗಾತ್ ।**
**ತಯಾಭಿ ಪೂಜಿತಃ ಪಶ್ಚಾತ್ ಪಂಪಾಂ ಪ್ರಾಪ ಸಲಕ್ಷ್ಮಣಃ ॥ ೨೮ ॥**

ತತಃ = ನಂತರ, ಪ್ರೀತಃ = ಸಂತೋಷಗೊಂಡ, ಸಲಕ್ಷ್ಮಣಃ = ಲಕ್ಷ್ಮಣನನ್ನು ಒಡಗೊಂಡ, ರಘುಶ್ರೇಷ್ಠಃ = ರಾಮನು, ಶಬರ್ಯಾಶ್ರಮಂ = ಶಬರಿಯ ಆಶ್ರಮವನ್ನು ಅಭ್ಯಗಾತ್ = ಸೇರಿದನು. ತಯಾ = ಅವಳಿಂದ, ಅಭಿಪೂಜಿತಃ = ಪೂಜೆಗೊಳ್ಳಲ್ಪಟ್ಟವನಾಗಿ, ಪಶ್ಚಾತ್ = ನಂತರ, ಪಂಪಾಂ = ಪಂಪಾ ಸರೋವರವನ್ನು, ಪ್ರಾಪ= ಸೇರಿದನು.

ಈ ಮಾತಿನಿಂದ ಸಂತೋಷಗೊಂಡ ರಾಮಚಂದ್ರನು ಲಕ್ಷ್ಮಣನ ಜೊತೆಯಲ್ಲಿ ಶಬರಿಯ ಆಶ್ರಮವನ್ನು ಸೇರಿದನು. ಅಲ್ಲಿ ಅವಳಿಂದ ಪೂಜೆಯನ್ನು ಕೈಗೊಂಡು ಮುಂದೆ ಪಂಪಾ ಸರೋವರವನ್ನು ಸೇರಿದನು.

**ಇತಿ ಅರಣ್ಯಕಾಂಡಃ**

ಅರಣ್ಯಕಾಂಡವು ಮುಗಿಯಿತು

## ಅಥ ಕಿಷ್ಕಿಂಧಾಕಾಂಡಃ

### ಕಿಷ್ಕಿಂಧಾಕಾಂಡ

**ಹನೂಮಾನಥ ಸುಗ್ರೀವ ನಿರ್ದಿಷ್ಟೋ ರಾಮಲಕ್ಷ್ಮಣೌ ।**
**ಪ್ರಾಪ್ಯ ಶ್ರುತ್ವಾ ಚ ವೃತ್ತಾಂತಂ ತೇನ ತೌ ಸಮಯೋಜಯತ್ ॥ ೧ ॥**

ಅಥ = ಅನಂತರ, ಸುಗ್ರೀವ ನಿರ್ದಿಷ್ಟಃ = ಸುಗ್ರೀವನಿಂದ ಆಜ್ಞಾಪ್ತನಾದ, ಹನೂಮಾನ್ = ಹನುಮಂತನು, ರಾಮಲಕ್ಷ್ಮಣೌ = ರಾಮಲಕ್ಷ್ಮಣರಿಬ್ಬರನ್ನೂ, ಪ್ರಾಪ್ಯ = ಸೇರಿ, ವೃತ್ತಾಂತಂ ಚ = ಅವರ ವಿಚಾರಗಳನ್ನೂ ಸಹ, ಶ್ರುತ್ವಾ = ಕೇಳಿ, ತೌ = ಅವರಿಬ್ಬರನ್ನೂ, ತೇನ = ಸುಗ್ರೀವನೊಡನೆ, ಸಮಯೋಜಯತ್ = ಸೇರಿಸಿದನು.

ಸುಗ್ರೀವನಿಂದ ಆಜ್ಞೆಯನ್ನು ಹೊಂದಿದ ಹನುಮಂತನು ರಾಮಲಕ್ಷ್ಮರ ಹತ್ತಿರಕ್ಕೆ ಹೋಗಿ ಅವರ ವೃತ್ತಾಂತಗಳನ್ನೆಲ್ಲಾ ಕೇಳಿ ತಿಳಿದುಕೊಂಡು ಅವರಿಬ್ಬರನ್ನೂ ಸುಗ್ರೀವನೊಂದಿಗೆ ಭೇಟಿ ಮಾಡಿಸಿದನು.

**ತತೋ ರಾಮಸ್ಯ ವೃತ್ತಾಂತಂ ಸುಗ್ರೀವಾಯ ನಿವೇದ್ಯಸಃ ।**
**ಸಖ್ಯಂ ಚ ಕಾರಯಾಮಾಸ ತಯೋಃ ಪಾವಕ ಸನ್ನಿಧೌ ॥ ೨ ॥**

ತತಃ = ಅನಂತರ, ಸಃ = ಅವನು, ರಾಮಸ್ಯ = ರಾಮನ, ವೃತ್ತಾಂತಂ = ಸಮಾಚಾರವನ್ನು, ಸುಗ್ರೀವಾಯ = ಸುಗ್ರೀವನಿಗೆ, ನಿವೇದ್ಯ = ತಿಳಿಸಿ, ತಯೋಃ = ಅವರಿಗೆ, ಪಾವಕ ಸನ್ನಿಧೌ = ಅಗ್ನಿಯ ಮುಂದೆ, ಸಖ್ಯಂ ಚ = ಸ್ನೇಹವನ್ನೂ ಕೂಡ, ಕಾರಯಾಮಾಸ = ಮಾಡಿಸಿದನು.

ನಂತರ ಅವನು ರಾಮನ ವೃತ್ತಾಂತವನ್ನು ಸುಗ್ರೀವನಿಗೆ ತಿಳಿಸಿ ಅವರಿಗೆ ಅಗ್ನಿಯ ಮುಂದೆ ಸ್ನೇಹವನ್ನೂ ಮಾಡಿಸಿದನು.

**ಪ್ರತಿಜಜ್ಞೇ ತದಾರಾಮಃ "ಹನಿಷ್ಯಾಮೀತಿ ವಾಲಿನಂ" ।**
**"ದರ್ಶಯಿಷ್ಯಾಮಿ ವೈದೇಹೀಂ" ಇತ್ಯನ್ಯೇನ ಚ ಸಂಶ್ರುತಂ ॥ ೩ ॥**

ತದಾ = ಆಗ, ರಾಮಃ = ರಾಮನು, ವಾಲಿನಂ = ವಾಲಿಯನ್ನು, ಹನಿಷ್ಯಾಮಿ = ಸಂಹರಿಸುತ್ತೇನೆ, ಇತಿ = ಎಂಬುದಾಗಿ, ಪ್ರತಿಜಜ್ಞೇ = ಪ್ರತಿಜ್ಞೆ ಮಾಡಿದನು. ಅನ್ಯೇ ಚ = ಬೇರೆಯುವನಿಂದಲೂ (ಸುಗ್ರೀವನಿಂದಲೂ), ವೈದೇಹೀಂ = ಸೀತೆಯನ್ನು, ದರ್ಶಯಿಷ್ಯಾಮಿ = ತೋರಿಸುತ್ತೇನೆ, ಇತಿ = ಎಂಬುದಾಗಿ, ಸಂಶ್ರುತಂ = ಪ್ರತಿಜ್ಞೆ ಮಾಡಲ್ಪಟ್ಟಿತು.

ಆಗ ರಾಮನು "ವಾಲಿಯನ್ನು ಸಂಹರಿಸುತ್ತೇನೆ" ಎಂಬುದಾಗಿ ಪ್ರತಿಜ್ಞೆಯನ್ನು ಮಾಡಲು ಸುಗ್ರೀವನೂ ಕೂಡ "ಸೀತೆಯನ್ನು ತೋರಿಸುತ್ತೇನೆ" ಎಂದು ಪ್ರತಿಜ್ಞೆ ಮಾಡಿದನು.

**ಸುಗ್ರೀವೇಣಾಥ ರಾಮಾಯ ಭ್ರಾತೃವೈರಸ್ಯ ಕಾರಣಂ ।**
**ನಿವೇದಿತಮಶೇಷೇಣ ಬಲಾಧಿಕ್ಯಂ ಚ ತಸ್ಯ ತತ್ ॥ ೪ ॥**

ಅಥ = ನಂತರ, ಸುಗ್ರೀವೇಣ = ಸುಗ್ರೀವನಿಂದ, ರಾಮಾಯ = ರಾಮನಿಗೆ, ತತ್ = ಆ ಯಾವ, ಭ್ರಾತೃವೈರಸ್ಯ = ಸೋದರರ ನಡುವಣ ವೈರದ, ಕಾರಣಂ = ಕಾರಣವು, ಚ = ಮತ್ತು, ತಸ್ಯ = ಆ ವಾಲಿಯ. ಬಲಾಧಿಕ್ಯಂ = ಹೆಚ್ಚಿನ ಪರಾಕ್ರಮದ ವಿಷಯವೂ, ಅಶೇಷೇಣ = ಒಂದೂಉಳಿಯದಂತೆ, ನಿವೇದಿತಂ = ಹೇಳಲ್ಪಟ್ಟಿತು.

ನಂತರ ಸುಗ್ರೀವನು ರಾಮನಿಗೆ ತನಗೂ ವಾಲಿಗೂ ನಡುವಣದ ವೈರತ್ವದ ಕಾರಣವನ್ನೂ ಆ ವಾಲಿಯು ಅತ್ಯಂತ ಪರಾಕ್ರಮಶಾಲಿಯೆಂಬ ವಿಷಯವನ್ನೂ ಸಂಪೂರ್ಣವಾಗಿ ಹೇಳಿದನು.

**ತತ್ಕ್ಷಣಂ ದುಂದುಭೇಃ ಕಾಯಂ ಸುಗ್ರೀವೇಣ ಪ್ರದರ್ಶಿತಂ ।**
**ಸುದೂರಂ ಪ್ರೇಷಯಾಮಾಸ ಪಾದಾಂಗುಷ್ಠೇನ ರಾಘವಃ ॥ ೫ ॥**

ತತ್ಕ್ಷಣಂ = ಆಕ್ಷಣವೇ, ಸುಗ್ರೀವೇಣ = ಸುಗ್ರೀವನಿಂದ, ಪ್ರದರ್ಶಿತಂ = ತೋರಿಸಲ್ಪಟ್ಟಂತಹ, ದುಂದುಭೇಃ = ದುಂದುಭಿ ಎನ್ನುವ ರಾಕ್ಷಸನ, ಕಾಯಂ = ಶರೀರವನ್ನು, ರಾಘವಃ = ರಾಮನು, ಪಾದಾಂಗುಷ್ಠೇನ = ಕಾಲಿನ ಹೆಬ್ಬೆರಳಿನಿಂದ, ಸುದೂರಂ = ಬಹಳ ದೂರಕ್ಕೆ, ಪ್ರೇಷಯಾಮಾಸ = ಚಿಮ್ಮಿದನು.

ಆ ಕ್ಷಣವೇ ಸುಗ್ರೀವನಿಂದ ಪ್ರದರ್ಶಿಸಲ್ಪಟ್ಟಂತಹ ದುಂದುಭಿ ಎಂಬ ರಾಕ್ಷಸನ ಶರೀರವನ್ನು ರಾಮನು ತನ್ನ ಕಾಲಿನ ಹೆಬ್ಬೆರಳಿನಿಂದ ಬಹುದೂರಕ್ಕೆ ಚಿಮ್ಮಿದನು.

**ಪುನಶ್ಚ ದರ್ಶಿತಾಂಸ್ತೇನ ಸಾಲಾನ್ ಸಪ್ತ ರಘೂತ್ತಮಃ ।**
**ಬಾಣೇನೈಕೇನ ಚಿಚ್ಛೇದ ಸಾರ್ಧಂ ತಸ್ಯಾನು ಶಂಕಯಾ ॥ ೬ ॥**

ಪುನಃ = ಮತ್ತೆ, ರಘೂತ್ತಮಃ = ರಾಮನು, ತೇನ = ಅವನಿಂದ, ದರ್ಶಿತಾನ್ = ತೋರಿಸಲ್ಪಟ್ಟ, ಸಪ್ತ ಸಾಲಾನ್ = ಏಳು ತಾಳೇಮರಗಳನ್ನು, ತಸ್ಯ = ಆ ಸುಗ್ರೀವನ, ಅನುಶಂಕಯಾ = ಸಂದೇಹದ, ಸಾರ್ಧಂ = ಜೊತೆಗೆ, ಏಕೇನ = ಒಂದೇ, ಬಾಣೇನ = ಬಾಣದಿಂದ, ಚಿಚ್ಛೇದ = ಕಡಿದುಹಾಕಿದನು.

ಮತ್ತೆ ರಾಮಚಂದ್ರನು ಅವನಿಂದ ತೋರಿಸಲ್ಪಟ್ಟ ಏಳು ತಾಳೇಮರಗಳನ್ನೂ ಅವನ ಸಂದೇಹದ ಜೊತೆಗೇ ಒಂದೇ ಬಾಣದಿಂದ ಕಡಿದುಹಾಕಿದನು.

**ಕಿಷ್ಕಿಂಧಾಂ ಪ್ರಾಪ್ಯ ಸುಗ್ರೀವಃ ತತೋ ರಾಮ ಸಮನ್ವಿತಃ ।**
**ಜಗರ್ಜಾತೀವ ಸಂಹೃಷ್ಟಃ ಕೋಪಯನ್ ವಾನರಾಧಿಪಂ ॥ ೭ ॥**

ತತಃ = ನಂತರ, ರಾಮಸಮನ್ವಿತಃ = ರಾಮನಿಂದ ಕೂಡಿದ, ಸುಗ್ರೀವಃ = ಸುಗ್ರೀವನು, ಕಿಷ್ಕಿಂಧಾಂ = ಕಿಷ್ಕಿಂಧೆಯನ್ನು, ಪ್ರಾಪ್ಯ = ಸೇರಿ, ಅತೀವ = ಹೆಚ್ಚಾಗಿ, ಸಂಹೃಷ್ಟಃ = ಸಂತೋಷದಿಂದ ಕೂಡಿದವನಾಗಿ, ವಾನರಾಧಿಪಂ = ವಾನರ ಯಜಮಾನನಾದ ವಾಲಿಯನ್ನು, ಕೋಪಯನ್ = ಕೋಪಗೊಳಿಸುತ್ತ, ಜಗರ್ಜ = ಗರ್ಜಿಸಿದನು.

ಆದಾದ ನಂತರ ರಾಮನಿಂದ ಕೂಡಿದ ಸುಗ್ರೀವನು ಕಿಷ್ಕಿಂಧೆಯನ್ನು ಸೇರಿ ಅತೀವ ಸಂತೋಷದಿಂದ ವಾಲಿಯನ್ನು ಕೋಪಗೊಳಿಸುವ ರೀತಿ ಜೋರಾಗಿ ಗರ್ಜಿಸಿದನು.

**ವಾಲೀ ನಿಷ್ಕ್ರಮ್ಯ ಸುಗ್ರೀವಂ ಸಮರೇಽಪೀಡಯದ್ಭೃಶಂ ।**
**ಸೋಽಪಿ ಸಂಭಗ್ನ ಸರ್ವಾಂಗಃ ಪ್ರಾದ್ರವದ್ರಾಘವಾಂತಿಕಂ ॥ ೮ ॥**

ವಾಲೀ = ವಾಲಿಯು, ನಿಷ್ಕ್ರಮ್ಯ = ಹೊರಕ್ಕೆ ಬಂದು, ಸಮರೇ = ಯುದ್ಧದಲ್ಲಿ, ಸುಗ್ರೀವಂ = ಸುಗ್ರೀವನನ್ನು, ಭೃಶಂ = ಅತಿಯಾಗಿ, ಅಪೀಡಯತ್ = ಪೀಡಿಸಿದನು. ಸಃ ಅಪಿ = ಅವನಾದರೋ, ಸಂಭಗ್ನ ಸರ್ವಾಂಗಃ = ಘಾಸಿಗೊಳಿಸಲ್ಪಟ್ಟ ಅಂಗಾಂಗಗಳಿಂದ ಕೂಡಿ, ರಾಘವಾಂತಿಕಂ = ರಾಮನ ಸಮೀಪವನ್ನು, ಪ್ರಾದ್ರವತ್ = ಸೇರಿಕೊಂಡನು.

ವಾಲಿಯು ಹೊರಗೆ ಬಂದು ಯುದ್ಧದಲ್ಲಿ ಸುಗ್ರೀವನನ್ನು ಅತಿಯಾಗಿ ಹಿಂಸೆ ಮಾಡಿದನು. ಸುಗ್ರೀವನಾದರೋ ಘಾಸಿಗೊಂಡ ಅಂಗಾಂಗವುಳ್ಳವನಾಗಿ ರಾಮನ ಸಮೀಪವನ್ನು ಓಡಿ ಸೇರಿಕೊಂಡನು.

**ಕೃತ ಚಿನ್ಹಸ್ತು ರಾಮೇಣ ಪುನರೇವ ಸ ವಾಲಿನಂ ।**
**ರಣಾಯಾಥಾಹ್ವಯತ್ ಕ್ಷಿಪ್ರಂ ತಸ್ಥೌ ರಾಮಸ್ತಿರೋಹಿತಃ ॥ ೯ ॥**

ರಾಮೇಣ = ರಾಮನಿಂದ, ಕೃತಚಿನ್ಹಃ = ಗುರುತುಮಾಡಲ್ಪಟ್ಟವನಾಗಿ, ಸಃ ತು = ಅವನಾದರೋ (ಸುಗ್ರೀವ), ಪುನಃ ಏವ = ಮತ್ತೊಮ್ಮೆ, ವಾಲಿನಂ = ವಾಲಿಯನ್ನು, ರಣಾಯ = ಯುದ್ಧಕ್ಕೆ, ಆಹ್ವಯತ್ = ಕರೆದನು ಅಥ = ನಂತರ, ರಾಮಃ = ರಾಮನು, ತಿರೋಹಿತಃ = ಮರೆಮಾಡಲ್ಪಟ್ಟವನಾಗಿ, ತಸ್ಥೌ = ನಿಂತನು.

ರಾಮನಿಂದ ಗುರುತುಮಾಡಲ್ಪಟ್ಟ ಸುಗ್ರೀವನು ಪುನಃ ವಾಲಿಯನ್ನು ಯುದ್ಧಕ್ಕೆ ಕರೆದನು. ಆಗ ರಾಮನು ಮರೆಯಲ್ಲಿ ನಿಂತನು.

**ಹೇಮಮಾಲೀ ತತೋ ವಾಲೀ ತಾರಯಾಽಭಿಹಿತಂ ಹಿತಂ ।**
**ನಿರಸ್ಯ ಕುಪಿತೋ ಭ್ರಾತ್ರಾ ರಣಂ ಚಕ್ರೇ ಸುದಾರುಣಂ ॥ ೧೦ ॥**

ತತಃ = ನಂತರ, ಹೇಮಮಾಲೀ = ಚಿನ್ನದ ಹಾರದಿಂದ ಅಲಂಕೃತನಾದ, ವಾಲೀ = ವಾಲಿಯು, ತಾರಯಾ = ಹೆಂಡತಿಯಾದ ತಾರೆಯಿಂದ, ಅಭಿಹಿತಂ = ಹೇಳಲ್ಪಟ್ಟ, ಹಿತಂ = ಒಳ್ಳೆಯ ಮಾತುಗಳನ್ನು, ಕುಪಿತಃ ಸನ್ = ಕೋಪದಿಂದ, ನಿರಸ್ಯ = ಅಲಕ್ಷಿಸಿ, ಭ್ರಾತ್ರಾ = ಸೋದರನೊಡನೆ, ಸುದಾರುಣಂ = ಭೀಕರವಾದ, ರಣಂ = ಯುದ್ಧವನ್ನು. ಚಕ್ರೇ = ಮಾಡಿದನು.

ಚಿನ್ನದ ಮಾಲೆಯಿಂದ ಅಲಂಕೃತನಾದ ವಾಲಿಯು ಹೆಂಡತಿಯಾದ ತಾರೆಯಿಂದ ಹೇಳಲ್ಪಟ್ಟ ಹಿತವಾದ ಮಾತುಗಳನ್ನು ಕೋಪದೊಡನೆ ಅಲಕ್ಷ್ಯಮಾಡಿ ಸಹೋದರನಾದ ಸುಗ್ರೀವನೊಡನೆ ಘೋರವಾದ ಯುದ್ಧವನ್ನು ಮಾಡಿದನು.

**ಬಾಣೇನ ವಾಲಿನಂ ರಾಮೋ ವಿಧ್ವಾ ಭೂಮೌ ನ್ಯಪಾತಯತ್ ।**
**ಸೋಽಪಿ ರಾಮ ಇತಿಜ್ಞಾತ್ವಾ ದೇಹಂ ತ್ಯಕ್ತ್ವಾ ದಿವಂ ಯಯೌ ॥ ೧೧ ॥**

ರಾಮಃ = ರಾಮನು, ವಾಲಿನಂ ವಾಲಿಯನ್ನು, ಬಾಣೇನ = ಬಾಣದಿಂದ, ವಿಧ್ವಾ = ಹೊಡೆದು, ಭೂಮೌ = ಭೂಮಿಯಲ್ಲಿ, ನ್ಯಪಾತಯತ್ = ಬೀಳಿಸಿದನು. ಸಃ ಅಪಿ = ವಾಲಿಯೂ ಕೂಡ, ರಾಮಃ ಇತಿ = ರಾಮನೆಂದು, ಜ್ಞಾತ್ವಾ = ತಿಳಿದು, ದೇಹಂ = ದೇಹವನ್ನು, ತ್ಯಕ್ತ್ವಾ = ಬಿಟ್ಟು, ದಿವಂ ಯಯೌ = ಸ್ವರ್ಗವನ್ನು ಸೇರಿದನು.

ರಾಮನು ವಾಲಿಯನ್ನು ಬಾಣದಿಂದ ಹೊಡೆದು ನೆಲದಲ್ಲಿ ಬೀಳಿಸಲು ವಾಲಿಯು ತನ್ನನ್ನು ಕೊಂದವನು ರಾಮನೆಂದು ತಿಳಿದುಕೊಂಡು ದೇಹವನ್ನು ಬಿಟ್ಟು ಸ್ವರ್ಗವನ್ನು ಸೇರಿದನು.

**ಪಶ್ಚಾತ್ತಪಂತಂ ಸುಗ್ರೀವಂ ಸಮಾಶ್ವಾಸ್ಯ ರಘೂತ್ತಮಃ ।**
**ವಾನರಾಣಾಂ ಅಧಿಪತಿಂ ಚಕಾರಾಶ್ರಿತ ವತ್ಸಲಃ ॥ ೧೨ ॥**

ಆಶ್ರಿತ ವತ್ಸಲಃ = ಆಶ್ರಿತರನ್ನು ಕಾಪಾಡುವಂತಹವನಾದ, ರಘೂತ್ತಮಃ = ರಘುರಾಮನು, ಪಶ್ಚಾತ್ತಪಂತಂ = ಪಶ್ಚಾತ್ತಾಪಪಡುತ್ತಿರುವ ಸುಗ್ರೀವಂ = ಸುಗ್ರೀವನನ್ನು, ಸಮಾಶ್ವಾಸ್ಯ = ಸಮಾಧಾನಪಡಿಸಿ, (ತಂ = ಅವನನ್ನು), ವಾನರಾಣಾಂ = ವಾನರರ, ಅಧಿಪತಿಂ = ಮುಖ್ಯಸ್ಥನನ್ನಾಗಿ, ಚಕಾರ = ಮಾಡಿದನು.

ಆಶ್ರಿತರನ್ನು ಕಾಪಾಡುವಂತಹವನಾದ ರಘುರಾಮನು ಪಶ್ಚಾತ್ತಾಪಪಡುತ್ತಿದ್ದ ಸುಗ್ರೀವನನ್ನು ಸಮಾಧಾನಪಡಿಸಿ ಅವನನ್ನು ವಾನರರ ರಾಜನನ್ನಾಗಿ ಮಾಡಿದನು.

**ತತೋ ಮಾಲ್ಯವತಃ ಪೃಷ್ಠೇ ರಾಮೋ ಲಕ್ಷ್ಮಣ ಸಂಯುತಃ ।**
**ಉವಾಸ ಚತುರೋ ಮಾಸಾನ್ ಸೀತಾವಿರಹ ದುಃಖಿತಃ ॥ ೧೩ ॥**

ತತಃ = ಅನಂತರ, ಲಕ್ಷ್ಮಣ ಸಂಯುತಃ = ಲಕ್ಷ್ಮಣನ ಜೊತೆಯಲ್ಲಿ, ರಾಮಃ = ರಾಮನು, ಸೀತಾವಿರಹ ದುಃಖಿತಃ = ಸೀತೆಯ ವಿರಹದ ದುಃಖದಿಂದ, ಮಾಲ್ಯವತಃ = ಮಾಲ್ಯವಂತ ಪರ್ವತದ, ಪೃಷ್ಠೇ = ಮೇಲೆ, ಚತುರಃ ಮಾಸಾನ್ = ನಾಲ್ಕು ತಿಂಗಳು ಗಳನ್ನು, ಉವಾಸ = ವಾಸಮಾಡಿದನು.

ಅನಂತ ಲಕ್ಷ್ಮಣ ಸಮೇತನಾದ ರಾಮಚಂದ್ರನು ಸೀತೆಯ ವಿರಹ ದುಃಖದಿಂದ ಮಾಲ್ಯವಂತ ಪರ್ವತದ ಮೇಲೆ ನಾಲ್ಕು ತಿಂಗಳಕಾಲ ವಾಸಮಾಡಿದನು.

**ಅಥ ರಾಮಸ್ಯ ನಿರ್ದೇಶಾತ್ ಲಕ್ಷ್ಮಣೋ ವಾನರಾಧಿಪಂ ।**
**ಆನಯತ್ ಪ್ಲವಗೈಸ್ಸಾರ್ಥಂ ಹನುಮತ್ಪ್ರಮುಖೈರ್ಗಿರಿಂ ॥ ೧೪ ॥**

ಅಥ = ನಂತರ, ರಾಮಸ್ಯ = ರಾಮನ, ನಿರ್ದೇಶಾತ್ = ಕಟ್ಟಳೆಯಿಂದ, ಲಕ್ಷ್ಮಣಃ = ಲಕ್ಷ್ಮಣನು, ವಾನರಾಧಿಪಂ = ಸುಗ್ರೀವನನ್ನು, ಹನುಮತ್ಪ್ರಮುಖೈಃ = ಹನುಮಂತ ಮುಂತಾದ ಪ್ರಮುಖರಾದ, ಪ್ಲವಗೈಃ = ವಾನರರ, ಸಾರ್ಥಂ = ಜೊತೆಗೆ, ಗಿರಿಂಪ್ರತಿ = ಬೆಟ್ಟವನ್ನು ಕುರಿತು, ಆನಯತಾ = ಕರೆದುತಂದನು.

ರಾಮನ ಅಪ್ಪಣೆಯಂತೆ ಲಕ್ಷ್ಮಣನು ಸುಗ್ರೀವನನ್ನು ಹನುಮಂತ ಮುಂತಾದ ಪ್ರಮುಖ ವಾನರರ ಜೊತೆ ಆ ಪರ್ವತಕ್ಕೆ ಕರೆತಂದನು.

**ಸುಗ್ರೀವೋ ರಾಘವಂ ದೃಷ್ಟ್ವಾ ವಚನಾತ್ ತಸ್ಯ ವಾನರಾನ್ ।**
**ನ್ಯಯುಂಕ್ತ ಸೀತಾಮನ್ವೇಷ್ಟುಂ ಆಶಾಸು ಚತಸೃಷ್ವಪಿ ॥ ೧೫ ॥**

ಸುಗ್ರೀವಃ = ಸುಗ್ರೀವನು, ರಾಘವಂ = ರಾಮನನ್ನು, ದೃಷ್ಟ್ವಾ = ಕಂಡು, ತಸ್ಯ = ಅವನ, ವಚನಾತ್ = ಮಾತಿನಂತೆ, ಚತಸೃಷು = ನಾಲ್ಕು, ಆಶಾಸು ಅಪಿ = ದಿಕ್ಕುಗಳಲ್ಲೂ ಕೂಡ, ಸೀತಾಂ = ಸೀತೆಯನ್ನು, ಅನ್ವೇಷ್ಟುಂ = ಹುಡುಕಲು, ವಾನರಾನ್ = ಕಪಿಗಳನ್ನು, ನ್ಯಯುಂಕ್ತ = ನಿಯಮಿಸಿದನು.

ಸುಗ್ರೀವನು ರಾಮನನ್ನು ನೋಡಿ ಅವನ ಮಾತಿನ ಪ್ರಕಾರ ಸೀತೆಯನ್ನು ಹುಡುಕಿಕೊಂಡು ಬರಲು ನಾಲ್ಕು ದಿಕ್ಕುಗಳಿಗೂ ಕಪಿಗಳನ್ನು ನಿಯಮಿಸಿದನು.

**ತತೋ ಹನುಮತಃ ಪಾಣೌ ದದೌ ರಾಮೋಽಂಗುಲೀಯಕಂ ।**
**ವಿಶ್ವಾಸಾಯತು ವೈದೇಹ್ಯಾಃ ತದ್ ಗೃಹೀತ್ವಾ ಸ ನಿರ್ಯಯೌ ॥ ೧೬ ॥**

ತತಃ = ನಂತರ, ರಾಮಃ = ರಾಮನು, ಹನುಮತಃ = ಹನುಮಂತನ, ಪಾಣೌ = ಕೈಗಳಲ್ಲಿ, ವೈದೇಹ್ಯಾ = ಸೀತೆಯ, ವಿಶ್ವಾಸಾಯಾ = ವಿಶ್ವಾಸವುಂಟಾಗಲು, ಅಂಗುಳೀ-ಯಕಂ = ಉಂಗುರವನ್ನು, ದದೌ = ಕೊಟ್ಟನು. ತತ್ = ಅದನ್ನು, ಗೃಹೀತ್ವಾ = ತೆಗೆದುಕೊಂಡು, ಸಃ = ಅವನು (ಹನುಮಂತನು), ನಿರ್ಯಯೌ = ಹೊರಟನು.

ರಾಮನು ಹನುಮಂತನ ಕೈಗಳಲ್ಲಿ ಸೀತೆಗೆ ವಿಶ್ವಾಸವೇರ್ಪಡುವುದಕ್ಕಾಗಿ ತನ್ನ ಉಂಗುರವನ್ನು ಕೊಟ್ಟನು. ಅದನ್ನು ತೆಗೆದುಕೊಂಡು ಹನುಮಂತನು ಹೊರಟನು.

**ತತೋ ಹನೂಮತ್ಪ್ರಮುಖಾಃ ವಾನರಾ ದಕ್ಷಿಣಾಂ ದಿಶಂ ।**
**ಗತ್ವಾ ಸೀತಾಂ ವಿಚಿನ್ವಂತಃ ಪರ್ವತಂ ವಿಂಧ್ಯಮಾಪ್ಲುವನ್ ॥ ೧೭ ॥**

ತತಃ = ನಂತರ, ಹನೂಮತ್ಪ್ರಮುಖಾಃ = ಹನುಮಂತನೇ ಮುಂತಾದ ಮುಖ್ಯರಾದ, ವಾನರಾಃ = ವಾನರರು, ದಕ್ಷಿಣಾಂ = ದಕ್ಷಿಣದ, ದಿಶಂ = ದಿಕ್ಕಿಗೆ, ಗತ್ವಾ = ಹೋಗಿ, ಸೀತಾಂ = ಸೀತೆಯನ್ನು, ವಿಚಿನ್ವಂತಃ = ಹುಡುಕುವಂಥಹವರಾಗಿ, ವಿಂಧ್ಯಂ = ವಿಂಧ್ಯವೆನ್ನುವ, ಪರ್ವತಂ = ಪರ್ವತವನ್ನು, ಆಪ್ಲುವನ್ = ಸೇರಿದರು

ಹನುಮಂತ ಮುಂತಾದ ವಾನರ ವೀರರು ದಕ್ಷಿಣ ದಿಕ್ಕಿಗೆ ಪ್ರಯಾಣ ಮಾಡಿ ಸೀತೆಯನ್ನು ಹುಡುಕುತ್ತಾ ವಿಂಧ್ಯಪರ್ವತವನ್ನು ಸೇರಿದರು.

**ಸಮಯಾತಿ ಕ್ರಮಾತ್ ತತ್ರ ಚಕ್ರುಃ ಪ್ರಾಯೋಪವೇಶನಂ ।**
**ತತ್ರ ಸಂಪಾತಿನಾ ಪ್ರೋಕ್ತಾಂ ಸೀತಾ ವಾರ್ತಾಂ ಚ ಶುಶ್ರುವುಃ ॥ ೧೮ ॥**

ಸಮಯ ಅತಿಕ್ರಮಾತ್ = ಸಮಯವು ಕಳೆಯುತ್ತಿದ್ದುದರಿಂದ, ತತ್ರ = ಅಲ್ಲಿ, ಪ್ರಾಯೋಪವೇಶನಂ = ಪ್ರಾಯೋಪವೇಶವನ್ನು (ಸಾಯುವವರೆಗೆ ಉಪವಾಸ ವ್ರತವನ್ನು), ಚಕ್ರುಃ = ಮಾಡಿದರು. ತತ್ರ = ಆ ಸಮಯದಲ್ಲಿ, ಸಂಪಾತಿನಾ = ಸಂಪಾತಿಯಿಂದ, ಪ್ರೋಕ್ತಾಂ = ಹೇಳಲ್ಪಟ್ಟ, ಸೀತಾ ವಾರ್ತಾಂ ಚ = ಸೀತೆಯ ಸಮಾಚಾರವನ್ನೂ ಸಹ, ಶುಶ್ರುವುಃ = ಕೇಳಿದರು.

ಸಮಯವು ಸುಮ್ಮನೆ ವ್ಯರ್ಥವಾಗಿ ಕಳೆಯುತ್ತಿರಲು ಅವರು ಪ್ರಾಯೋಪವೇಶ ವ್ರತವನ್ನು ಮಾಡಲು ತೊಡಗಿದರು. ಆಗ ಸಂಪಾತಿಯಿಂದ ಸೀತೆಯ ವಿಚಾರವು ಅವರಿಗೆ ತಿಳಿಯಿತು.

**ತತಃ ಪ್ರಾಪ್ಯ ರುದನ್ವಂತಃ ಅಂಗದಾದ್ಯಾಃ ಪ್ಲವಂಗಮಾಃ ।**
**ತಂ ವಿಲಂಘಯಿತುಂ ತೇಷಾಂ ನ ಕಶ್ಚಿದಭವತ್ಕ್ಷಮಃ ॥ ೧೯ ॥**

ತತಃ = ನಂತರ, ಅಂಗದಾದ್ಯಾಃ = ಅಂಗದನೇ ಮೊದಲಾದ, ಪ್ಲವಂಗಮಾಃ = ಕಪಿಗಳು, ಉದನ್ವಂತಂ = ಸಮುದ್ರವನ್ನು, ಪ್ರಾಪುಃ = ಬಂದು ಸೇರಿದರು. ತಂ = ಅದನ್ನು, ವಿಲಂಘಯಿತುಂ = ದಾಟುವುದಕ್ಕೆ, ತೇಷಾಂ = ಅವರಲ್ಲಿ, ಕ್ಷಮಃ = ಶಕ್ತಿ ಶಾಲಿಯಾದವನು, ಕಶ್ಚಿದಪಿ = ಒಬ್ಬನೂ ಕೂಡ, ನ ಅಭವತ್ = ಇರಲಿಲ್ಲ.

ಅನಂತರ ಅಂಗದನೇ ಮೊದಲಾದ ಕಪಿಗಳು ಸಮುದ್ರವನ್ನು ಬಂದು ಸೇರಿದರು. ಅದನ್ನು ದಾಟುವುದಕ್ಕೆ ಅವರಲ್ಲಿ ಒಬ್ಬ ಶಕ್ತಿಶಾಲಿಯೂ ಕೂಡ ಇರಲಿಲ್ಲ.

**ಸ್ವಪ್ರಭಾವ ಪ್ರಶಂಸಾಭಿಃ ಭೃಶಂ ಜಾಂಬವದುಕ್ತಿಭಿಃ ।**
**ಸಂ ವರ್ಧಿತೋ ಮಹೇಂದ್ರಾದ್ರಿಂ ಆರುರೋಹಾನಿಲಾತ್ಮಜಃ ॥ ೨೦ ॥**

ಸ್ವಪ್ರಭಾವ ಪ್ರಶಂಸಾಭಿಃ = ತನ್ನ ಶಕ್ತಿಯನ್ನು ಹೊಗಳುವ, ಜಾಂಬವದುಕ್ತಿ-ಭಿಃ = ಜಾಂಬುವಂತನ ಮಾತುಗಳಿಂದ, ಭೃಶಂ = ಹೆಚ್ಚಾಗಿ, ಸಂವರ್ಧಿತಃ = ಬೆಳೆಯು ಲ್ಪಟ್ಟ (ಹೆಚ್ಚಲ್ಪಟ್ಟ) ಬಲದಿಂದ ಕೂಡಿದ, ಅನಿಲಾತ್ಮಜಃ = ವಾಯುಪುತ್ರ ಹನು ಮಂತನು, ಮಹೇಂದ್ರಾದ್ರಿಂ = ಮಹೇಂದ್ರ ಪರ್ವತವನ್ನು, ಆರುರೋಹ = ಹತ್ತಿದನು.

ತನ್ನ ಶಕ್ತಿಯನ್ನು ಹೊಗಳುವ ಜಾಂಬವಂತನ ಮಾತುಗಳಿಂದ ಬೆಳೆಯುತ್ತಿರುವ ಶಕ್ತಿಯಿಂದ ವಾಯುಪುತ್ರನಾದ ಆಂಜನೇಯನು ಮಹೇಂದ್ರ ಪರ್ವತವನ್ನು ಹತ್ತಿದನು.

**ಇತಿ ಕಿಷ್ಕಿಂಧಾಕಾಂಡಃ**

ಕಿಷ್ಕಿಂಧಾಕಾಂಡವು ಮುಗಿಯಿತು

# ಅಥ ಸುಂದರಕಾಂಡಃ

## ಸುಂದರಕಾಂಡಃ

**ಅಭಿವಾದ್ಯಾಥ ಸಕಲಾನ್ ಅಮರಾನ್ ಪವನಾತ್ಮಜಃ ।**
**ಪಪ್ಲುವೇ ಚ ಗಿರೇಸ್ತಸ್ಮಾತ್ ವಿಲಂಘಯಿತುಮರ್ಣವಂ ॥ ೧ ॥**

ಅಥ = ನಂತರ, ಪವನಾತ್ಮಜಃ = ವಾಯುಪುತ್ರನಾದ ಹನುಮಂತನು, ಸಕಲಾನ್ = ಎಲ್ಲಾ, ಅಮರಾನ್ = ದೇವತೆಗಳನ್ನೂ, ಅಭಿವಾದ್ಯ = ನಮಸ್ಕರಿಸಿ, ಅರ್ಣವಂ = ಸಮುದ್ರವನ್ನು, ವಿಲಂಘಯಿತುಂ ಚ = ದಾಟುವುದಕ್ಕೋಸ್ಕರ, ತಸ್ಮಾತ್ = ಆ, ಗಿರೇಃ = ಮಹೇಂದ್ರ ಪರ್ವತದಿಂದ, ಪಪ್ಲುವೇ = ಹಾರಿದನು.

ಹನುಮಂತನು ಎಲ್ಲಾ ದೇವತೆಗಳನ್ನೂ ಅಭಿವಂದಿಸಿ ಸಮುದ್ರವನ್ನು ದಾಟುವುದಕ್ಕೋಸ್ಕರ ಮಹೇಂದ್ರ ಪರ್ವತದ ಶಿಖರದಿಂದ ಹಾರಿದನು.

**ಸ ತೋಷಯಿತ್ವಾ ಮೈನಾಕಂ ಸುರಸಾಮಭಿವಾದ್ಯ ಚ ।**
**ನಿಹತ್ಯ ಸಿಂಹಿಕಾಂ ನೀತ್ವಾ ಪಾರಂ ಪ್ರಾಪ ಮಹೋದಧೇ ॥ ೨ ॥**

ಸಃ = ಅವನು, ಮೈನಾಕಂ = ಮೈನಾಕವೆಂಬ ಸಮುದ್ರ ಮಧ್ಯದಲ್ಲಿದ್ದ ಪರ್ವತವನ್ನು, ತೋಷಯಿತ್ವಾ = ಆನಂದಪಡಿಸಿ, ಸುರಸಾಂ = ಸುರಸೆ ಎಂಬ ರಾಕ್ಷಸಿಯನ್ನು, ಅಭಿವಾದ್ಯ = ನಮಸ್ಕರಿಸಿ, ಚ = ಮತ್ತು, ಸಿಂಹಿಕಾಂ = ಸಿಂಹಿಕಾ ಎಂಬ ಮತ್ತೊಬ್ಬ ರಾಕ್ಷಸಿಯನ್ನು, ನಿಹತ್ಯ = ಕೊಂದುಹಾಕಿ, ಮಹೋದಧೇಃ = ವಿಸ್ತಾರವಾದ ಸಮುದ್ರದ, ಪಾರಂ = ದಡವನ್ನು, ಪ್ರಾಪ = ಸೇರಿದನು.

ಆ ಹನುಮಂತನು ಸಮುದ್ರದ ಮಧ್ಯದಲ್ಲಿ ಮೇಲಕ್ಕೆದ್ದ ಮೈನಾಕವೆಂಬ ಪರ್ವತವನ್ನು ಸಂತೋಷಪಡಿಸಿ, ಇವನ ಹಾರುವಿಕೆಗೆ ಅಡ್ಡಿಪಡಿಸಿದ ಸುರಸೆ ಎಂಬ ರಾಕ್ಷಸಿಗೆ ನಮಸ್ಕರಿಸಿ ಶಾಂತಗೊಳಿಸಿ, ಮತ್ತೊಬ್ಬ ರಾಕ್ಷಸಿಯಾದ ಸಿಂಹಿಕೆ ಎಂಬುವವಳನ್ನು ಸಂಹರಿಸಿ ಅಪಾರವಾದ ಸಮುದ್ರದ ಆ ಕಡೆಯ ದಡವನ್ನು ಸೇರಿದನು.

**ಲಂಕಾಧಿ ದೇವತಾಂ ಜಿತ್ವಾ ತಾಂ ಪ್ರವಿಶ್ಯಾನಿಲಾತ್ಮಜಃ ।**
**ಸೀತಾಂ ವಿಚಿನ್ವನ್ನದ್ರಾಕ್ಷೀತ್ ನಿದ್ರಾಣಂ ನಿಶಿ ರಾವಣಂ ॥ ೩ ॥**

ಅನಿಲಾತ್ಮಜಃ = ಹನುಮಂತನು, ಲಂಕಾಧಿ ದೇವತಾಂ = ಲಂಕೆಯ ಅಭಿಮಾನಿ ದೇವತೆ ಲಂಕಿಣಿಯನ್ನು, ಜಿತ್ವಾ = ಜಯಿಸಿ, ತಾಂ = ಆ ನಗರವನ್ನು, ಪ್ರವಿಶ್ಯ =

ಪ್ರವೇಶಿಸಿ, ನಿಶಿ = ರಾತ್ರಿಯಲ್ಲಿ, ಸೀತಾಂ = ಸೀತೆಯನ್ನು, ವಿಚಿನ್ವನ್ = ಹುಡುಕುತ್ತಾ, ನಿದ್ರಾಣಂ = ನಿದ್ರೆ ಮಾಡುತ್ತಿದ್ದ, ರಾವಣಂ = ರಾವಣನನ್ನು, ಅದ್ರಾಕ್ಷೀತ್ = ನೋಡಿದನು.

ಆಂಜನೇಯನು ಲಂಕಾಧಿದೇವತೆಯಾದ ಲಂಕಿಣಿಯನ್ನು ಜಯಿಸಿ ಆ ಪಟ್ಟಣವನ್ನು ಪ್ರವೇಶಮಾಡಿ ರಾತ್ರಿಯಲ್ಲಿ ಸೀತೆಯನ್ನು ಹುಡುಕುತ್ತಾ ಬರುವಾಗ ನಿದ್ರಿಸುತ್ತಿದ್ದ ರಾವಣನನ್ನು ಕಂಡನು.

**ಅಪಶ್ಯನ್ ತತ್ರ ವೈದೇಹೀಂ ವಿಚಿನ್ವಾನಃ ತತಸ್ತತಃ ।**
**ಅಶೋಕ ವನಿಕಾಂ ಗತ್ವಾ ಸೀತಾಂ ಖಿನ್ನಾಂ ದದರ್ಶಸಃ ॥ ೪ ॥**

ತತ್ರ = ಅಲ್ಲಿ, ವೈದೇಹೀಂ = ಸೀತೆಯನ್ನು, ಅಪಶ್ಯನ್ = ಕಾಣದೆ, ತತಸ್ತತಃ = ಅಲ್ಲಲ್ಲಿ, ವಿಚಿನ್ವಾನಃ = ಹುಡುಕುತ್ತಾ, ಸಃ = ಅವನು, ಅಶೋಕ ವನಿಕಾಂ = ಅಶೋಕ ವನವನ್ನು, ಗತ್ವಾ = ಸೇರಿ, ಖಿನ್ನಾಂ = ದುಃಖಿತಳಾದ, ಸೀತಾಂ = ಸೀತೆಯನ್ನು, ದದರ್ಶ = ನೋಡಿದನು.

ಅಲ್ಲಿ ವೈದೇಹಿಯನ್ನು ಕಾಣದೆ ಅಲ್ಲಲ್ಲಿ ಹುಡುಕುತ್ತಾ ಅವನು ಕಡೆಗೆ ಅಶೋಕ ವನವನ್ನು ಸೇರಿ, ಅಲ್ಲಿ ದುಃಖಿತೆಯಾಗಿದ್ದ ಸೀತೆಯನ್ನು ಕಂಡನು.

**ಪಾದಪಂ ಕಂಚಿದಾರುಹ್ಯ ತತ್ಪಲಾಶೈಃ ಸುಸಂವೃತಃ ।**
**ಅಸ್ತೇಸ್ಮ ಮಾರುತಿಸ್ತತ್ರ 'ಸೀತೇಯ'ಮಿತಿ ತರ್ಕಯನ್ ॥ ೫ ॥**

ತತ್ರ = ಅಲ್ಲಿ, ಕಂಚಿತ್ = ಒಂದಾನೊಂದು, ಪಾದಪಂ = ಮರವನ್ನು, ಆರುಹ್ಯ = ಹತ್ತಿ, ತತ್ಪಲಾಶೈ = ಅದರ ಎಲೆಗಳಿಂದ, ಸುಸಂವೃತಃ = ಚೆನ್ನಾಗಿ ಮುಚ್ಚಲ್ಪಟ್ಟವನಾಗಿ, ಮಾರುತಿಃ = ಹನುಮಂತನು, ಇಯಂ = ಇವಳು, ಸೀತಾ = ಸೀತೆಯು, ಇತಿ = ಎಂಬುದಾಗಿ, ತರ್ಕಯನ್ = ತರ್ಕ ಮಾಡುತ್ತಾ, ಅಸ್ತೇಸ್ಮ = ಇದ್ದನು.

ಅಲ್ಲಿದ್ದ ಒಂದಾನೊಂದು ಮರವನ್ನು ಹತ್ತಿ ಎಲೆಗಳನ್ನು ಚೆನ್ನಾಗಿ ಮುಚ್ಚಲ್ಪಟ್ಟವನಾಗಿ ಅವಿತುಕೊಂಡು ಹನುಮಂತನು 'ಇವಳು ಸೀತೆ' ಎಂಬುದಾಗಿ ಊಹೆ ಮಾಡಿದನು.

**ರಾವಣಸ್ತು ತದಾಽಭ್ಯೇತ್ಯ ಮೈಥಿಲೀಂ ಮದನಾರ್ದಿತಃ ।**
**'ಭಾರ್ಯಾ ಭವ ಮಮೇ'ತ್ಯೇವಂ ಬಹುಧಾ ಸಮಯಾಚತ ॥ ೬ ॥**

ಮದನಾರ್ದಿತಃ = ಕಾಮದಿಂದ ಆವರಿಸಲ್ಪಟ್ಟ, ರಾವಣಃ ತು = ರಾವಣನಾದರೋ,

ವಾಗ, ಅಭ್ಯೇತ್ಯ = ಬಂದು, ಮಮ = ನನ್ನ, ಭಾರ್ಯಾ = ಹೆಂಡತಿಯು,
ಓ, ಇತಿ = ಹೀಗೆಂದು, ಮೈಥಿಲೀಂ = ಸೀತೆಯನ್ನು, ಬಹುಧಾ = ಬಹು
ಸಮಯಾಚತ = ಬೇಡಿಕೊಂಡನು.

ರುದಿಂದ ಆವರಿಸಲ್ಪಟ್ಟ ರಾವಣನಾದರೋ ಆವಾಗ ಅಲ್ಲಿಗೆ ಬಂದು ಸೀತೆ
'ನೀನು ನನ್ನ ಹೆಂಡತಿಯಾಗು" ಎಂಬುದಾಗಿ ಬಹಳ ವಿಧವಾಗಿ ಬೇಡಿ

**ಹಂ ತ್ವದನುಗಾನಸ್ಯಾಂ' ಇತ್ಯೇಷಾ ತಂ ನಿರಾಕರೋತ್ ।**
**ನುಮನ್ಯು ಪರೀತಾತ್ಮ ರಾವಣೋಽಥ ಗೃಹಂಯಯೌ ॥ ೭ ॥**

ಂ = ನಾನು, ತ್ವದನುಗಾ = ನಿನ್ನನ್ನು ಹಿಂಬಾಲಿಸುವವಳು, ನಸ್ಯಾಂ = ಆಗ
ಇತಿ = ಹೀಗೆಂದು, ಏಷಾಂ = ಸೀತೆಯು, ತಂ = ಅವನನ್ನು, ನಿರಾ-
= ನಿರಾಕರಿಸಿದಳು. ಅಥ = ನಂತರ, ಕಾಮಮನ್ಯು ಪರೀತಾತ್ಮಾ = ಕಾಮ
ಕೋಪದಿಂದ ಕೂಡಿದ ಮನಸ್ಸುಳ್ಳವನಾಗಿ, ರಾವಣಃ = ರಾವಣನು, ಗೃಹಂ
= ಮನೆಯನ್ನು ಸೇರಿದನು.

ನು ನಿನ್ನನ್ನು ಹಿಂಬಾಲಿಸುವವಳಲ್ಲ" ಎಂದು ಸೀತೆಯು ಅವನನ್ನು ನಿರಾಕರಿ
ನಂತರ ಕಾಮ ಮತ್ತು ಕೋಪದಿಂದ ಆವೃತನಾದ ರಾವಣನು ತನ್ನ ಮನೆ
ರಿದನು

**ತು ರಾವಣೇ ಸೀತಾಂ ಪ್ರಲಪಂತೀಂ ಸ ಮಾರುತಿಃ ।**
**ಕ್ತ್ವಾ ರಾಮಸ್ಯ ವೃತ್ತಾಂತಂ ಪ್ರದದೌಚಾಂಗುಳೀಯಕಂ ॥ ೮ ॥**

ವಣೇತು = ರಾವಣನಾದರೋ, ಗತೇ ಸತಿ = ಹಿಂತಿರುಗುತ್ತಿರಲು, ಪ್ರಲ-
ಪ್ರಲಾಪಿಸುತ್ತಿರುವ, ಸೀತಾಂ = ಸೀತೆಯನ್ನು, ಪ್ರತಿ = ಕುರಿತು, ಸಃ
= ಆ ಹನುಮಂತನು, ರಾಮಸ್ಯ = ರಾಮನ, ವೃತ್ತಾಂತಂ = ಸಮಾಚಾರ
ಉಕ್ತ್ವಾ = ಹೇಳಿ, ಅಂಗುಳೀಯಕಂ ಚ = ಉಂಗುರವನ್ನೂ ಸಹ,
ನೀಡಿದನು.

ವಣನು ಹಿಂತಿರುಗಿದ ನಂತರ ಸೀತೆಯು ರೋಧಿಸುತ್ತಿರಲು ಹನುಮಂತನು
ವೃತ್ತಾಂತವನ್ನು ಅವಳಿಗೆ ತಿಳಿಸಿದ್ದಲ್ಲದೆ ಉಂಗುರವನ್ನು ಸಹ ನೀಡಿದನು.

**ತತ್ ಸಮಾಧಾಯ ವೈದೇಹೀ ವಿಲಪ್ಯ ಚ ಭೃಶಂ ಪುನಃ ।**
**ಚೂಡಾಮಣಿಂ ದದೌ ತಸ್ಯ ಕರೇ ಸಾ ಮಾರುತೇಃ ಪ್ರಿಯಂ ॥**

ವೈದೇಹೀ=ಸೀತೆಯು, ತತ್=ಆ ಉಂಗುರವನ್ನು, ಸಮಾಧಾಯ= ತೆಗೆದುಕೊಂಡು, ಪುನಃ=ಮತ್ತೆ, ಭೃಶಂ=ಬಹಳ, ವಿಲಪ್ಯ=ದುಃಖಿಸಿ, ಪ್ರಿಯಂ= ಪ್ರಿಯವಾದ, ಚೂಡಾಮಣಿಂ=ಚೂಡಾಮಣಿಯೆಂಬ ತಲೆಯಲ್ಲಿ ಧರಿಸುವ ಆಭರಣ ವನ್ನು, ತಸ್ಯ=ಆ, ಮಾರುತೇಃ=ಹನುಮಂತನ, ಕರೇ=ಕೈಯ್ಯಲ್ಲಿ, ದದೌ= ಕೊಟ್ಟಳು.

ಸೀತೆಯು ಉಂಗುರವನ್ನು ತೆಗೆದುಕೊಂಡು ಮತ್ತೆ ಅತಿಯಾಗಿ ಪ್ರಲಾಪಿಸಿ ಪ್ರಿಯವಾದ ಶಿರೋಭೂಷಣವಾದ ಚೂಡಾಮಣಿಯನ್ನು ಹನುಮಂತನ ಕೈಯಲ್ಲಿ ಕೊಟ್ಟಳು.

**ಮಾ ವಿಷಾದಂ ಕೃಥಾ ದೇವಿ! "ರಾಘವೋ ರಾವಣಂ ರಣೇ ।**
**ಹತ್ವಾ ತ್ವಾಂ ನೇಷ್ಯತೀ" ಽತ್ಯೇನಾಂ ಆಶ್ವಾಸ್ಯ ಸ ವಿನಿರ್ಯಯೌ ॥ ೧೦**

ದೇವಿ=ಎಲೈ, ದೇವಿಯೇ!, ವಿಷಾದಂ=ದುಃಖವನ್ನು, ಮಾಕೃಥಾ= ಮಾಡಬೇಡ. ರಾಘವಃ=ರಾಮಚಂದ್ರನು, ರಾವಣಃ=ರಾವಣನನ್ನು, ರಣೇ= ಯುದ್ಧದಲ್ಲಿ, ಹತ್ವಾ=ಸಂಹರಿಸಿ, ತ್ವಾಂ=ನಿನ್ನನ್ನು, ನೇಷ್ಯಸಿ=ಕರೆದೊಯ್ಯು ವನು. ಇತಿ=ಹೀಗೆಂದು, ಏನಾಂ=ಇವಳನ್ನು, ಆಶ್ವಾಸ್ಯಾ=ಸಮಾಧಾನಪಡಿಸಿ ಸಃ=ಅವನು, ನಿರ್ಯಯೌ=ಹೊರಟನು.

"ಅಳಬೇಡ, ದೇವಿ! ರಾಮನು ಬಂದು ರಾವಣನನ್ನು ಯುದ್ಧದಲ್ಲಿ ಕೊಂದು ನಿನ್ನನ್ನು ಕರೆದೊಯ್ಯುವನು" ಎಂದು ಅವಳನ್ನು ಸಮಾಧಾನಪಡಿಸಿ ಹೊರಟನು.

**ನೀತಿಮಾನ್ ಸೋಽಪಿ ಸಂಚಿಂತ್ಯ ಬಭಂಜೋಽಪವನಂ ಚ ತತ್ ।**
**ಅಕ್ಷಾದೀನಿ ಚ ರಕ್ಷಾಂಸಿ ಬಹೂನಿ ಸಮರೇಽವಧೀತ್ ॥ ೧೧**

ನೀತಿಮಾನ್=ನೀತಿವಂತನಾದ, ಸಃ ಅಪಿ=ಅವನಾದರೋ, ಸಂಚಿಂತ್ಯ= ಯೋಚಿಸಿ, ತತ್=ಆ, ಉಪವನಂ=ಉದ್ಯಾನವನವನ್ನು, ಬಭಂಜ=ಹಾಳುಮಾಡಿ ದನು. ಬಹೂನಿ=ಅನೇಕ, ರಕ್ಷಾಂಸಿ ಚ=ರಾಕ್ಷಸರನ್ನೂ ಕೂಡ, ಚ=ಮತ್ತು ಅಕ್ಷಾದೀನಿ=ಅಕ್ಷಕುಮಾರ ಮುಂತಾದವರನ್ನು, ಸಮರೇ=ಯುದ್ಧದಲ್ಲಿ, ಅವ ಧೀತ್=ವಧಿಸಿದನು.

ನೀತಿವಂತನಾದ ಹನುಮಂತನಾದರೋ ಯೋಚಿಸಿ ನೋಡಿ ಆ ಉದ್ಯಾನವನವನ್ನು ಹಾಳುಮಾಡಿದನು. ಅವನನ್ನು ಹಿಡಿಯಲು ಬಂದ ಅನೇಕ ರಾಕ್ಷಸರುಗಳನ್ನೂ ಅಕ್ಷಕುಮಾರ ಮುಂತಾದ ವೀರರನ್ನೂ ಯುದ್ಧದಲ್ಲಿ ಸಂಹರಿಸಿದನು.

**ತತಃ ಶಕ್ರಜಿತಾ ಯುದ್ಧೇ ಬದ್ಧಃ ಪವನ ನಂದನಃ ।**
**ಪ್ರತಾಪಂ ರಘುನಾಥಸ್ಯ ರಾವಣಾಯ ನ್ಯವೇದಯತ್ ॥ ೧೨ ॥**

ತತಃ = ನಂತರ, ಯುದ್ಧೇ = ಯುದ್ಧದಲ್ಲಿ, ಶಕ್ರಜಿತಾ = ಇಂದ್ರಜಿತ್ತುವಿನಿಂದ, ಬದ್ಧಃ = ಬಂಧಿಸಲ್ಪಟ್ಟ, ಪವನ ನಂದನಃ = ಹನುಮಂತನು, ರಾವಣಾಯ = ರಾವಣನಿಗೆ, ರಘುನಾಥಸ್ಯ = ರಾಮಚಂದ್ರನ ಪ್ರತಾಪವನ್ನು, ನ್ಯವೇದಯತ್ = ನಿವೇದಿಸಿದನು.

ನಂತರ ಯುದ್ಧದಲ್ಲಿ ಇಂದ್ರಜಿತ್ತುವಿನಿಂದ ಬಂಧಿಸಲ್ಪಟ್ಟ ಹನುಮಂತನು ರಾವಣನಿಗೆ ರಾಮಚಂದ್ರನ ಪರಾಕ್ರಮವನ್ನು ವಿವರಿಸಿದನು.

**ರಕ್ಷೋ ದೀಪಿತ ಲಾಂಗೂಲಃ ಸ ತು ಲಂಕಾಮಶೇಷತಃ ।**
**ದಗ್ಧ್ವಾ ಸಾಗರ ಮುತ್ತೀರ್ಯ ವಾನರಾಂಸ್ತಾನುಪಾಗಮತ್ ॥ ೧೩ ॥**

ರಕ್ಷೋ = ರಾಕ್ಷಸರಿಂದ, ದೀಪೀತಲಾಂಗೂಲಃ = ಹತ್ತಿಸಲ್ಪಟ್ಟ ಬಾಲದಿಂದ ಕೂಡಿದ, ಸಃ ತು = ಆ ಹನುಮಂತನಾದರೋ, ಲಂಕಾಂ = ಲಂಕಾಪಟ್ಟಣವನ್ನು, ಅಶೇಷತಃ = ಸ್ವಲ್ಪವೂ ಉಳಿಯದಂತೆ, ದಗ್ಧ್ವಾ = ದಹಿಸಿ, ಸಾಗರಂ = ಸಮುದ್ರವನ್ನು, ಉತ್ತೀರ್ಯ = ದಾಟಿ, ತಾನ್ = ತಾನು ಹಿಂದೆ ಬಿಟ್ಟಿದ್ದ, ವಾನರಾನ್ = ಕಪಿಗಳನ್ನು, ಉಪಾಗಮತ್ = ಮತ್ತೆ ಸೇರಿದನು.

ರಾಕ್ಷಸರಿಂದ ಹತ್ತಿಸಲ್ಪಟ್ಟ ಬಾಲದಿಂದ ಹನುಮಂತನು ಲಂಕಾಪಟ್ಟಣವನ್ನು ಸ್ವಲ್ಪವೂ ಉಳಿಯದಂತೆ ಹತ್ತಿಸಿಬಿಟ್ಟನು. ನಂತರ ಸಮುದ್ರವನ್ನು ದಾಟಿ ತಾನು ಹಿಂಬಿಟ್ಟಿದ್ದ ವಾನರರನ್ನು ಮತ್ತೆ ಸೇರಿಕೊಂಡನು.

**ಸಗತ್ವಾ ವಾನರೈಃ ಸಾಕಂ ರಾಘವಾಯಾತ್ಮನಾಕೃತಂ ।**
**ನಿವೇದ್ಯ ಸಕಲಂ ಕೃತ್ಯಂ ದದೌ ಚೂಡಾಮಣಿಂ ಚ ತಮ್ ॥ ೧೪ ॥**

ಸಃ = ಅವನು, ವಾನರೈಃ ಸಾಕಂ = ವಾನರರೊಂದಿಗೆ ಕೂಡಿ, ಗತ್ವಾ = ಹೋಗಿ, ಆತ್ಮನಾ = ತನ್ನಿಂದ, ಕೃತಂ = ಮಾಡಲ್ಪಟ್ಟ, ಸಕಲಂ = ಎಲ್ಲಾ, ಕೃತ್ಯಂ =

ಕಾರ್ಯಗಳನ್ನು, ರಾಘವಾಯ=ರಘುರಾಮನಿಗೆ, ನಿವೇದ್ಯ=ಹೇಳಿ, ತಂ ಚೂಡಾ ಮಣಿಂ ಚ=ಆ ಚೂಡಾಮಣಿಯನ್ನೂ ಕೂಡ, ದದೌ=ಕೊಟ್ಟನು.

ವಾನರರ ಜೊತೆಗೂಡಿ ಅವನು ರಾಮನ ಬಳಿಗೆ ಹೋಗಿ ತನ್ನಿಂದ ಮಾ ಲ್ಪಟ್ಟ ಕಾರ್ಯಗಳೆಲ್ಲವನ್ನೂ ನಿವೇದಿಸಿ ಅವನಿಗೆ ಚೂಡಾಮಣಿಯನ್ನೂ ಸ ನೀಡಿದನು.

## ಇತಿ ಸುಂದರಕಾಂಡಃ

ಸುಂದರಕಾಂಡವು ಮುಗಿಯಿತು



## ಅಥ ಯುದ್ಧಕಾಂಡಃ

### ಯುದ್ಧಕಾಂಡ

**ಅಥಾ ಸಂಖ್ಯೈಃ ಕಪಿಗಣೈಃ ಸುಗ್ರೀವ ಪ್ರಮುಖೈಃ ಸಹ ।**
**ನಿರ್ಯಯೌ ರಾಘವಸ್ತೂರ್ಣಂ ತೀರಂ ಪ್ರಾಪ ಮಹೋದಧೇಃ ॥ ೧ ॥**

ಅಥ = ಅನಂತರ, ಸುಗ್ರೀವ ಪ್ರಮುಖೈಃ ಸಹ = ಸುಗ್ರೀವನೇ ಮುಂತಾದ ಮುಖ್ಯಸ್ಥರಿಂದ ಕೂಡಿದ, ಅಸಂಖ್ಯೈಃ = ಅಪರಿಮಿತವಾದ, ಕಪಿಗಣೈಃ ಸಹ = ಕಪಿಗಳ ಸಮೂಹದೊಡನೆ, ರಾಘವಃ = ರಾಮಚಂದ್ರನು, ನಿರ್ಯಯೌ = ಹೊರಟನು. ತೂರ್ಣಂ = ಬೇಗನೆ. ಮಹೋದಧೇಃ = ಸಮುದ್ರದ, ತೀರಂ = ದಡವನ್ನು, ಪ್ರಾಪ = ಸೇರಿದನು.

ನಂತರ ಸುಗ್ರೀವಾದಿ ಪ್ರಮುಖರನ್ನು ಒಡಗೊಂಡ ಅಸಂಖ್ಯಾತ ಕಪಿಸೈನ್ಯ ದೊಡನೆ ರಾಮನು ಹೊರಟು ಬೇಗನೆ ಸಮುದ್ರತೀರವನ್ನು ಸೇರಿದನು.

**ತದಾ ವಿಭೀಷಣೋ ಭ್ರಾತ್ರಾ ತ್ಯಕ್ತೋ ರಾಮಮುಪಾಗಮತ್ ।**
**ಲಂಕಾಧಿಪತ್ಯೇಽಭ್ಯಾಷಿಂಚದ್ ಏನಂ ರಾಮೋಽರಿಮರ್ದನಃ ॥ ೨ ॥**

ತದಾ = ಆಗ, ಭ್ರಾತ್ರಾ = ಸೋದರನಿಂದ, ತ್ಯಕ್ತಃ = ತ್ಯಜಿಸಲ್ಪಟ್ಟ, ವಿಭೀಷಣಃ = ವಿಭೀಷಣನು, ರಾಮಂ = ರಾಮನನ್ನು, ಉಪಾಗಮತ್ = ಬಂದು ಸೇರಿದನು. ಅರಿಮರ್ದನಃ = ಹಗೆಯನ್ನು ನಾಶಪಡಿಸುವಂತಹ, ರಾಮಃ = ರಾಮನು, ಏನಂ = ಇವನನ್ನು, ಲಂಕಾಧಿಪತ್ಯೇ = ಲಂಕಾ ರಾಜ್ಯಕ್ಕೆ, ಅಭ್ಯಷಿಂಚಿತ್ = ಅಭಿಷೇಕ ಮಾಡಿದನು.

ಆಗ ಸಹೋದರನಾದ ರಾವಣನಿಂದ ತ್ಯಜಿಸಲ್ಪಟ್ಟ ವಿಭೀಷಣನೆಂಬುವನು ರಾಮ ನನ್ನು ಬಂದುಸೇರಿದನು. ಅರಿಮರ್ದನನಾದ ರಾಮಚಂದ್ರನು ಅವನನ್ನು ಲಂಕಾ ರಾಜ್ಯಕ್ಕೆ ಪಟ್ಟಾಭಿಷೇಕ ಮಾಡಿದನು.

**ಉಕ್ತಮಾರ್ಗಃ ಸಮುದ್ರೇಣ ತತ್ರ ಸೇತುಂ ನಲೇನ ಸಃ ।**
**ಕಾರಯಿತ್ವಾ ತೇನಗತ್ವಾ ಸುವೇಲಂ ಪ್ರಾಪ ಪರ್ವತಂ ॥ ೩ ॥**

ಸಃ = ಅವನು, ಸಮುದ್ರೇಣ = ಸಮುದ್ರದಿಂದ, ಉಕ್ತಮಾರ್ಗಃ = ಹೇಳಲ್ಪಟ್ಟ ಮಾರ್ಗವುಳ್ಳವನಾಗಿ, ತತ್ರ = ಅಲ್ಲಿ, ಸೇತುಂ = ಸೇತುವೆಯನ್ನು, ನಲೇನ = ನಳನೆಂಬುವ

ನಿಂದ, ಕಾರಯಿತ್ವಾ = ನಿರ್ಮಿಸಿ, ತೇನ = ಅದರ ಮೂಲಕ, ಗತ್ವಾ = ಹೋಗಿ, ಸುವೇಲಂ = ಸುವೇಲವೆನ್ನುವ, ಪರ್ವತಂ = ಪರ್ವತವನ್ನು, ಪ್ರಾಪ = ಸೇರಿದನು.

ರಾಮನು ಸಮುದ್ರರಾಜನಿಂದ ಸೂಚಿಸಲ್ಪಟ್ಟ ಮಾರ್ಗದಲ್ಲಿ ಸೇತುವೆಯನ್ನು ನಳ ಎನ್ನುವವನಿಂದ ನಿರ್ಮಿಸಿ ಅದರ ಮೇಲೆ ಹೋಗಿ ಸುವೇಲವೆನ್ನುವ ಪರ್ವತವನ್ನು ಸೇರಿದನು.

**ತತೋ ರಾಘವ ನಿರ್ದಿಷ್ಟಾಃ ನೀಲಮುಖ್ಯಾಃ ಪ್ಲವಂಗಮಾಃ ।**
**ರುರುಧುಃ ಸರ್ವತೋ ಲಂಕಾಂ ವೃಕ್ಷ ಪಾಷಾಣಪಾಣಯಃ ॥ ೪ ॥**

ತತಃ = ನಂತರ, ರಾಘವ ನಿರ್ದಿಷ್ಟಾಃ = ರಾಮನಿಂದ ನಿರ್ದೇಶಿಸಲ್ಪಟ್ಟ, ನೀಲ ಮುಖ್ಯಾಃ = ನೀಲನೇ ಮೊದಲಾದ, ಪ್ಲವಂಗಮಾಃ = ಕಪಿಗಳು, ವೃಕ್ಷ ಪಾಷಾಣ ಪಾಣಯಃ = ಮರ ಮತ್ತು ಕಲ್ಲುಗಳನ್ನು ಹೊಂದಿದ ಕೈಯುಳ್ಳವರಾಗಿ, ಲಂಕಾಂ = ಲಂಕಾಪಟ್ಟಣವನ್ನು, ಸರ್ವತಃ = ಎಲ್ಲ ಕಡೆಯಿಂದಲೂ, ರುರುಧುಃ = ಮುತ್ತಿದರು.

ನಂತರ ರಾಮನಿಂದ ನಿರ್ದೇಶಿಸಲ್ಪಟ್ಟ ನೀಲನೇ ಮುಂತಾದ ಕಪಿಗಳು ಮರ ಮತ್ತು ಕಲ್ಲುಬಂಡೆಗಳನ್ನು ಕೈಗಳಲ್ಲಿ ಹೊತ್ತುಕೊಂಡು ಲಂಕೆಯನ್ನು ಎಲ್ಲಾ ಕಡೆಗಳಿಂದಲೂ ಮುತ್ತಿದರು.

**ರಾವಣಸ್ಯ ನಿಯೋಗೇನ ನಿರ್ಗತಾನ್ ಯುಧಿ ರಾಕ್ಷಸಾನ್ ।**
**ಪ್ರಹಸ್ತ ಪ್ರಮುಖಾನ್ ಹತ್ವಾ ನೇದುಸ್ತೇ ಸಿಂಹವಿಕ್ರಮಾಃ ॥ ೫ ॥**

ರಾವಣಸ್ಯ = ರಾವಣನ, ನಿಯೋಗೇನ = ಅಪ್ಪಣೆಯಂತೆ, ನಿರ್ಗತಾನ್ = ಹೊರಟ, ಪ್ರಹಸ್ತ ಮುಖಾನ್ = ಪ್ರಹಸ್ತ ಮೊದಲಾದ, ರಾಕ್ಷಸಾನ್ = ರಾಕ್ಷಸರನ್ನು ಯುಧಿ = ಯುದ್ಧದಲ್ಲಿ, ಹತ್ವಾ = ಸಂಹರಿಸಿ, ಸಿಂಹ ವಿಕ್ರಮಾಃ = ಸಿಂಹದಂತೆ ಬಲ ಶಾಲಿಗಳಾದ, ತೇ = ಅವರು, ನೇದುಃ = ಗರ್ಜಿಸಿದರು

ರಾವಣನ ಅಪ್ಪಣೆಯಂತೆ ಹೊರಟು ಬಂದ ಪ್ರಹಸ್ತ ಮೊದಲಾದ ರಾಕ್ಷಸರನ್ನು ಯುದ್ಧದಲ್ಲಿ ಸಂಹಾರ ಮಾಡಿ ಆ ಕಪಿವೀರರು ಗರ್ಜನೆ ಮಾಡಿದರು.

**ಸುಗ್ರೀವಶ್ಚ ಹನೂಮಾಂಶ್ಚ ತಥಾ ರಾಘವ ಲಕ್ಷ್ಮಣೌ ।**
**ರಾಕ್ಷಸಾನ್ ಸುಬಹೂನ್ ಯುದ್ಧೇ ಜಘ್ನುರ್ಭೀಮಪರಾಕ್ರಮಾಃ ॥ ೬ ॥**

ಸುಗ್ರೀವಃ = ಸುಗ್ರೀವನೂ, ಹನೂಮಾನ್ ಚ = ಹನುಮಂತನೂ, ತಥಾ = ಹಾಗೆಯೇ, ರಾಘವ ಲಕ್ಷ್ಮಣೌ ಚ = ರಾಮಲಕ್ಷ್ಮಣರೂ ಕೂಡ, ಭೀಮಪರಾಕ್ರಮಾಃ

ಸಂತಃ = ಭಯಂಕರ ಪರಾಕ್ರಮವುಳ್ಳವರಾಗಿ, ಯುದ್ಧೇ=ಯುದ್ಧದಲ್ಲಿ, ಸುಬಹೂನ್=ಬಹಳ, ರಾಕ್ಷಸಾನ್ = ರಾಕ್ಷಸರನ್ನು, ಜಗ್ನುಃ = ಸಂಹರಿಸಿದರು.

ಸುಗ್ರೀವ, ಹನುಮಂತ ಹಾಗೂ ರಾಮಲಕ್ಷ್ಮಣರೂ ಸಹ ಭಯಂಕರ ಪರಾಕ್ರಮವುಳ್ಳವರಾಗಿ ಯುದ್ಧದಲ್ಲಿ ಅನೇಕ ರಾಕ್ಷಸರನ್ನು ಸಂಹರಿಸಿದರು.

**ರಾವಣಿಸ್ತು ತತೋಽಭ್ಯೇತ್ಯ ಸಮರೇ ರಾಮಲಕ್ಷ್ಮಣೌ ।**
**ನನಾಹ ನಾಗಪಾಶೇನ ನಾಗಾರಿಸ್ತೌ ವ್ಯಮೋಚಯತ್ ॥ ೭ ॥**

ತತಃ = ನಂತರ, ರಾವಣಿ=ರಾವಣನ ಮಗ ಇಂದ್ರಜಿತ್ತು, ಅಭ್ಯೇತ್ಯ= ಬಂದು, ಸಮರೇ=ಯುದ್ಧದಲ್ಲಿ, ರಾಮಲಕ್ಷ್ಮಣೌ=ರಾಮಲಕ್ಷ್ಮಣರಿಬ್ಬರನ್ನೂ, ನಾಗಪಾಶೇನ=ನಾಗಪಾಶದಿಂದ, ನನಾಹ = ಕಟ್ಟಿದನು. ನಾಗಾರೀ ತು = ಹಾವುಗಳ ಶತ್ರುವಾದ ಗರುಡನಾದರೋ, ತೌ= ಅವರಿಬ್ಬರನ್ನೂ, ವ್ಯಮೋಚಯತ್ = ಬಿಡಿಸಿದನು.

ನಂತರ ರಾವಣನ ಮಗನಾದ ಇಂದ್ರಜಿತ್ತು ಬಂದು ಯುದ್ಧದಲ್ಲಿ ರಾಮಲಕ್ಷ್ಮಣರಿಬ್ಬರನ್ನೂ ನಾಗಪಾಶದಿಂದ ಬಂಧಿಸಿದನು. ಹಾವುಗಳ ಶತ್ರುವಾದ ಗರುಡನು ರಾಮಲಕ್ಷ್ಮಣರಿಬ್ಬರನ್ನೂ ನಾಗಪಾಶದಿಂದ ಬಿಡಿಸಿದನು.

**ರಾವಣೋಽಪಿ ತತೋ ಯುದ್ಧೇ ರಾಘವೇಣ ಪರಾಜಿತಃ ।**
**ಕುಂಭಕರ್ಣಂ ಪ್ರಭೋಧ್ಯಾಶು ರಾಮಂ ಹಂತುಂ ನ್ಯಯುಂಕ್ತ ಚ ॥ ೮ ॥**

ರಾವಣಃ ಅಪಿ = ರಾವಣನಾದರೋ, ತತಃ = ನಂತರ, ಯುದ್ಧೇ = ಯುದ್ಧದಲ್ಲಿ ರಾಘವೇಣ= ರಾಮನಿಂದ, ಪರಾಜಿತಃ = ಸೋಲಿಸಲ್ಪಟ್ಟು, ಕುಂಭಕರ್ಣಂ = ಕುಂಭಕರ್ಣನನ್ನು, ಪ್ರಭೋಧ್ಯ= ಏಳುವಂತೆ ಮಾಡಿ, ರಾಮಂ = ರಾಮನನ್ನು, ಆಶು = ಬೇಗನೆ, ಹಂತುಂ = ಕೊಲ್ಲಲು, ನ್ಯಯುಂಕ್ತ = ನಿಯಮಿಸಿದನು.

ರಾವಣನಾದರೋ ಯುದ್ಧದಲ್ಲಿ ರಾಮನಿಂದ ಪರಾಜಿತನಾಗಿ ಕುಂಭಕರ್ಣನನ್ನು ಏಳುವಂತೆ ಮಾಡಿ ರಾಮನನ್ನು ಬೇಗನೆ ಕೊಲ್ಲುವಂತೆ ನಿಯೋಜಿಸಿದನು.

**ತತೋ ವಾನರ ಸಂಘಾಂಶ್ಚ ಭಕ್ಷಯಂತಂ ನಿಶಾಚರಂ ।**
**ಐಂದ್ರೇಣಾಸ್ತ್ರೇಣ ರಾಮೋಽಪಿ ನಿಜಘಾನ ರಣೇ ಭೃಶಂ ॥ ೯ ॥**

ತತಃ = ನಂತರ, ವಾನರ ಸಂಘಾನ್ = ವಾನರರ ಗುಂಪುಗಳನ್ನೇ, ಭೃಶಂ= ಹೆಚ್ಚಾಗಿ, ಭಕ್ಷಯಂತಂ = ತಿನ್ನುತ್ತಿರುವ, ನಿಶಾಚರಂ ಚ = ರಾಕ್ಷಸನನ್ನು, ರಾಮಃ

ಅಪಿ = ರಾಮನಾದರೋ, ರಣೇ = ಯುದ್ಧದಲ್ಲಿ, ಐಂದ್ರೇಣಾಸ್ತ್ರೇಣ = ಇಂದ್ರಾಸ್ತ್ರದಿಂ ನಿಜಘಾನ = ಸಂಹಾರ ಮಾಡಿದನು.

ನಂತರ ವಾನರರ ಗುಂಪನ್ನೇ ಹೆಚ್ಚಾಗಿ ಭಕ್ಷಿಸುತ್ತಾ ಇದ್ದ ಕುಂಭಕರ್ಣ ರಾಕ್ಷ ನನ್ನು ರಾಮನು ಯುದ್ಧದಲ್ಲಿ ಇಂದ್ರಾಸ್ತ್ರವನ್ನು ಅನುಸಂಧಾನಮಾಡಿ ಕೊಂ ಹಾಕಿದನು

**ತತೋ ರಾವಣ ಸಂದಿಷ್ಟೌ ದೇವಾಂತಕ ನರಾಂತಕೌ ।**
**ಹನೂಮದಂಗದಾಭ್ಯಾಂತು ನಿಹತೌ ರಣಮೂರ್ಧನೀ ॥ ೧೦**

ತತಃ = ನಂತರ, ರಾವಣ ಸಂದಿಷ್ಟೌ = ರಾವಣನಿಂದ ಅಪ್ಪಣೆ ಮಾಡಲ್ಪಟ್ಟ ದೇವಾಂತಕ ನರಾಂತಕೌ ತು = ದೇವಾಂತಕ ಮತ್ತು ನರಾಂತಕ ಎನ್ನುವ ರಾಕ್ಷ ರಿಬ್ಬರೂ ಕೂಡ, ರಣವಮೂರ್ಧನಿ = ರಣರಂಗದಲ್ಲಿ, ಹನೂಮದಂಗದಾಭ್ಯಾಂ = ಹನುಮಂತ ಮತ್ತು ಅಂಗದರಿಂದ, ನಿಹತೌ = ಕೊಲ್ಲಲ್ಪಟ್ಟರು.

ನಂತರ ರಾವಣನಿಂದ ಕಳುಹಲ್ಪಟ್ಟ ದೇವಾಂತಕ ನರಾಂತಕ ಎಂಬ ಇಬ್ಬ ರಾಕ್ಷಸರನ್ನೂ ಹನುವಂತ ಮತ್ತು ಅಂಗದರು ಸಂಹಾರ ಮಾಡಿದರು.

**ಅಥಾತಿಕಾಯಮಾಯಾನ್ತಂ ರಥಮಾರುಹ್ಯವಾಹಿನೀಂ ।**
**ಅರ್ದಯನ್ತಂ ಮಹಾಕಾಯಂ ಲಕ್ಷ್ಮಣಶ್ಚಾ ವಧೀಚ್ಛರೈಃ ॥ ೧೧**

ಅಥ = ಅನಂತರ, ರಥಂ = ರಥವನ್ನು, ಆರುಹ್ಯ – ಹತ್ತಿ, ಆಯಾಂತಂ = ಬಂ ವಾಹಿನೀಂ = ಸೇನೆಯನ್ನು, ಅರ್ದಯನ್ತಂ = ಕಷ್ಟಕ್ಕೆ ಈಡುಮಾಡುವವನಾದ, ಮ ಕಾಯಂ = ಮಹಾಕಾಯನೆಂಬುವವನನ್ನು, ಚ = ಮತ್ತು ಅತಿಕಾಯಂ = ಅತಿಕಾ ನೆಂಬುವವನನ್ನೂ ಕೂಡ, ಲಕ್ಷ್ಮಣಃ = ಲಕ್ಷ್ಮಣನು, ಶರೈಃ = ಬಾಣಗಳಿಂದ, ಅ ಧೀತ್ = ಕೊಂದುಹಾಕಿದನು.

ನಂತರ ರಥವನ್ನು ಹತ್ತಿಬಂದ ಸೈನ್ಯವನ್ನು ಕಷ್ಟಕ್ಕೆ ಸಿಲುಕಿಸಿದಂತಹ ಮ ಕಾಯನೆಂಬುವವನನ್ನೂ ಮತ್ತು ಅತಿಕಾಯನೆಂಬುವವನನ್ನೂ ಲಕ್ಷ್ಮಣನು ಬಾ ಗಳಿಂದ ಕೊಂದಂಹಾಕಿದನು.

**ತತೋ ರಾವಣ ಸಂದಿಷ್ಟಃ ಶಕ್ರಜಿದ್ರಾಘವೌ ರಣೇ ।**
**ಬ್ರಹ್ಮಾಸ್ತ್ರೇಣ ಚ ತೌ ಬಧ್ವಾ ವಾನರಾಂಶ್ಚಾ ವಧೀಚ್ಛರೈಃ ॥ ೧**

ತತಃ = ನಂತರ, ರಾವಣ ಸಂದಿಷ್ಟಃ = ರಾವಣನಿಂದ ಆಜ್ಞೆ ಹೊಂದಲ್ಪ

ಶಕ್ರಜಿತ್ = ಇಂದ್ರಜಿತ್ತು, ರಣೇ = ಯುದ್ಧದಲ್ಲಿ, ತೌ = ಆ ಯಾವ, ರಾಘವೌ ಚ = ರಾಮಲಕ್ಷ್ಮಣರಿಬ್ಬರನ್ನೂ ಕೂಡ, ಬ್ರಹ್ಮಾಸ್ತ್ರೇಣ = ಬ್ರಹ್ಮಾಸ್ತ್ರದಿಂದ, ಬಧ್ವಾ = ಕಟ್ಟಿ, ವಾನರಾಂಶ್ಚ = ವಾನರರನ್ನೂ ಕೂಡ, ಶರೈಃ = ಬಾಣಗಳಿಂದ, ಅವಧೀತ್ = ಕೊಂದನು.

ನಂತರ ರಾವಣನಿಂದ ಆಜ್ಞೆ ಹೊಂದಿದ ಇಂದ್ರಜಿತ್ತು ಯುದ್ಧದಲ್ಲಿ ರಾಮ ಲಕ್ಷ್ಮಣರಿಬ್ಬರನ್ನೂ ಸಹ ಬ್ರಹ್ಮಾಸ್ತ್ರದಿಂದ ಕಟ್ಟಿಹಾಕಿ ವಾನರರನ್ನು ಬಾಣಗಳಿಂದ ಕೊಂದನು.

**ಅಥ ಜಾಂಬವತೋ ವಾಕ್ಯಾತ್ ಗತ್ವಾ ಚೌಷಧಿ ಪರ್ವತಂ ।**
**ಮಾರುತಿಶ್ಚೌಷಧೀ ಸ್ತತ್ರಾsದೃಷ್ಟ್ವಾ ಕೋಪಂ ಚಕಾರ ಸಃ ॥ ೧೩ ॥**

ಅಥ = ನಂತರ, ಮಾರುತಿಃ = ಹನುಮಂತನು, ಜಾಂಬವತಃ = ಜಾಂಬವಂತನ, ವಾಕ್ಯಾತ್ = ಆದೇಶದಂತೆ, ಓಷಧಿಪರ್ವತಂ ಪ್ರತಿ = ಮೂಲಿಕೆಯ ಪರ್ವತವನ್ನು ಕುರಿತು, ಗತ್ವಾ = ಪ್ರಯಾಣಮಾಡಿ, ತತ್ರ = ಅಲ್ಲಿ, ಔಷಧೀಃ = ಮೂಲಿಕೆಗಳನ್ನು, ಅದೃಷ್ಟ್ವಾ = ಕಾಣದೆ, ಕೋಪಂ = ಕೋಪವನ್ನು, ಚಕಾರ ಚ = ಹೊಂದಿದನು.

ನಂತರದಲ್ಲಿ ಹನುಮಂತನು ಜಾಂಬವಂತನ ಸಲಹೆಯಂತೆ ಸಂಜೀವಿನೀ ಪರ್ವತಕ್ಕೆ ಹೋಗಿ ಅಲ್ಲಿ ಮೂಲಿಕೆಗಳನ್ನು ಕಾಣದೆ ಕೋಪಗೊಂಡನು.

**ಭೂಧರಂ ತಂ ಸಮುತ್ಪಾಟ್ಯ ಗೃಹೀತ್ವಾ ಪುನರಾಗತಃ ।**
**ತಾಸಾಂ ಗಂಧೇನ ವೈ ಸರ್ವಾನ್ ರಾಘವಾದೀನಜೀವಯುತ್ ॥ ೧೪ ॥**

ತಂ = ಆ, ಭೂಧರಂ = ಬೆಟ್ಟವನ್ನು, (ಸಃ = ಹನುಮಂತನು), ಸಮು-ತ್ಪಾಟ್ಯ = ಕಿತ್ತು, ಗೃಹೀತ್ವಾ = ಎತ್ತಿಕೊಂಡು, ಪುನಃ = ವಾಪಸ್ಸು, ಆಗತಃ = ಬಂದನು. ತಾಸಾಂ = ಅವುಗಳ (ಆ ಮೂಲಿಕೆಗಳ) ಗಂಧೇನೈವ = ವಾಸನೆಯಿಂದಲೇ ರಾಘವಾದೀನ್ = ರಾಮ ಮುಂತಾದ, ಸರ್ವಾನ್ = ಎಲ್ಲರನ್ನೂ, ಅಜೀವಯುತ್ = ಬದುಕಿಸಿದನು.

(ಹನುಮಂತನು) ಆ ಬೆಟ್ಟವನ್ನೇ ಕಿತ್ತು ಎತ್ತಿಕೊಂಡು ಬರಲು ಆ ಮೂಲಿಕೆ ಗಳ ವಾಸನೆಯಿಂದಲೇ ರಾಮ ಮುಂತಾದ ಎಲ್ಲರೂ ಬದುಕಿದರು.

**ರಾವಣಃ ಕಪಿಭಿರ್ದಗ್ಧಾಂ ಪುರೀಂ ವೀಕ್ಷ್ಯರುಷಾsನ್ವಿತಃ ।**
**ನ್ಯಯುಂಕ್ತ ಕುಂಭಕರ್ಣಸ್ಯ ಪುತ್ರೌ ಹಂತುಂ ಚ ರಾಘವೌ ॥ ೧೫ ॥**

ರಾವಣಃ = ರಾವಣನು, ಕಪಿಭಿಃ = ಕಪಿಗಳಿಂದ, ದಗ್ಧಾಂ = ಸುಡಲ್ಪಟ್ಟ ಪುರೀಂ = ಪಟ್ಟಣವನ್ನು, ವೀಕ್ಷ್ಯ = ನೋಡಿ, ರುಷಾಧ್ವಿತಃ = ಕೋಪದಿಂದ ಕೂಡಿದ ರಾಘವೌ = ರಾಮಲಕ್ಷ್ಮಣರಿಬ್ಬರನ್ನೂ, ಹಂತುಂ = ಕೊಲ್ಲಲು, ಕುಂಭಕರ್ಣಸ್ಯ = ಕುಂಭಕರ್ಣನ, ಪುತ್ರೌ ಚ = ಮಕ್ಕಳಿಬ್ಬರನ್ನೂ ಕೂಡ, ನ್ಯಯುಂಕ್ತ = ನಿಯಮಿಸಿದನು.

ರಾವಣನಾದರೋ ಕಪಿಗಳಿಂದ ದಹಿಸಲ್ಪಟ್ಟ ಲಂಕಾಪಟ್ಟಣವನ್ನು ಕಂಡು ಕೋಪಗೊಂಡು ರಾಮಲಕ್ಷ್ಮಣರನ್ನು ಕೊಲ್ಲಲು ಕುಂಭಕರ್ಣನ ಮಕ್ಕಳಿಬ್ಬರನ್ನು ನೇಮಿಸಿದನು.

**ಅಥಾರ್ದಯಂ ತೌ ತತ್ ಸೈನ್ಯಂ ವೀಕ್ಷ್ಯತೌ ಬಲಶಾಲಿನೌ ।**
**ಕುಂಭಂ ರಾಮೋಽವಧೀತ್ ಬಾಣೈಃ ನಿಕಂಭಂಚಾತ್ಮಜೋರವೇಃ ॥ ೧೬ ॥**

ಅಥ = ನಂತರ, ಬಲಶಾಲಿನೌ = ಬಲಶಾಲಿಗಳಾದ, ತತ್ = ಆ, ಯಾವ ಸೈನ್ಯಂ = ಕಪಿಸೈನ್ಯವನ್ನು, ಅರ್ದಯಂತೌ = ಕಷ್ಟಕ್ಕೀಡುಮಾಡಿದ, ತೌ = ಆ ಕುಂಭ ನಿಕುಂಭರನ್ನು, ವೀಕ್ಷ್ಯ = ನೋಡಿ, ರಾಮಃ = ರಾಮನು, ಬಾಣೈಃ = ಬಾಣಗಳಿಂದ, ಕುಂಭಂ = ಕುಂಭನನ್ನು ಅವಧೀತ್ = ಸಂಹರಿಸಿದನು. ರವೇಃ = ಸೂರ್ಯನ, ಆತ್ಮಜಃ- ದಿತ = ಮಗನಾದ ಸುಗ್ರೀವನೂ ಸಹ, ನಿಕುಂಭಂ = ನಿಕುಂಭನನ್ನು, ಅವಧೀತ್ = ಕೊಂದನು.

ನಂತರ ಬಲಶಾಲಿಗಳಾದ ಆ ಯಾವ ಕಪಿಸೈನ್ಯವನ್ನು ಕಷ್ಟಕ್ಕೆ ಈಡುಮಾಡಿದ ಕುಂಭ ನಿಕುಂಭರಿಬ್ಬರನ್ನೂ ನೋಡಿ ರಾಮನು ಬಾಣಗಳಿಂದ ಕುಂಭನನ್ನು ಸಂಹರಿಸಿ ದನು. ಸೂರ್ಯಪುತ್ರನಾದ ಸುಗ್ರೀವನೂ ಕೂಡ ನಿಕುಂಭನನ್ನು ಕೊಂದುಹಾಕಿದನು.

**ತತಃ ಖರಾತ್ಮಜಂ ತೇನ ರಾವಣೇನ ಪ್ರಚೋದಿತಂ ।**
**ಪೀಡಯಂತಂ ಕಪೀನ್ ಬಾಣೈಃ ಜಘಾನಸ್ತ್ರೇಣ ರಾಘವಃ ॥ ೧೭ ॥**

ತತಃ = ನಂತರ, ತೇನ = ಆ, ರಾವಣೇನ = ರಾವಣನಿಂದ, ಪ್ರಚೋದಿತಂ = ಪ್ರೇರೇಪಿಸಲ್ಪಟ್ಟು, ಕಪೀನ್ = ಕಪಿಗಳನ್ನು, ಬಾಣೈಃ = ಬಾಣಗಳಿಂದ, ಪೀಡ- ಯಂತಂ = ಪೀಡಿಸಿದ, ಖರಾತ್ಮಜಂ = ಖರನ ಮಗ ಮಕರಾಕ್ಷನನ್ನು, ರಾಘವಃ = ರಾಮನು, ಅಸ್ತ್ರೇಣ = ಬಾಣದಿಂದ, ಜಘಾನ = ಕೊಂದನು.

ನಂತರ ಆ ರಾವಣನಿಂದ ಪ್ರೇರೇಪಿಸಲ್ಪಟ್ಟು ಕಪಿಗಳನ್ನು ಬಾಣಗಳಿಂದ ಘಾಸಿ ಗೊಳಿಸಿದ ಖರನ ಮಗ ಮಕರಾಕ್ಷನನ್ನು ರಾಮನು ಕೊಂದನು.

**ತತಃ ಸಂತಪ್ತ ಹೃದಯಃ ರಾವಣೋ ಯುದ್ಧದುರ್ಮದಂ ।**
**ಪ್ರಚೋದಯಾಮಾಸ ಸುತಂ ಯುದ್ಧೇ ಹಂತುಂ ಸ ರಾಘವೌ ॥ ೧೮ ॥**

ತತಃ = ನಂತರ, ಸಂತಪ್ತ ಹೃದಯಃ = ದುಃಖದಿಂದ ಕೂಡಿದ ಹೃದಯವುಳ್ಳವನಾದ, ಸಃ ರಾವಣಃ = ಆ ರಾವಣನು, ಯುದ್ಧ ದುರ್ಮದಂ = ಯುದ್ಧ ಮಾಡುವುದರಲ್ಲಿ ಗರ್ವ ಹೊಂದಿದ, ಸುತಂ = ಮಗನಾದ ಇಂದ್ರಜಿತ್ತನ್ನು, ಯುದ್ಧೇ = ಯುದ್ಧದಲ್ಲಿ ರಾಘವೌ = ರಾಮಲಕ್ಷ್ಮಣರಿಬ್ಬರನ್ನೂ, ಹಂತುಂ = ಕೊಲ್ಲಲು, ಪ್ರಚೋದಯಾ-ಮಾಸ = ಪ್ರಚೋದಿಸಿದನು

ನಂತರ ದುಃಖತಪ್ತನಾದ ರಾವಣನು ಯುದ್ಧಮಾಡುವುದರಲ್ಲಿ ಗರ್ವಾಂಧನೆನಿಸಿದ ತನ್ನ ಮಗ ಇಂದ್ರಜಿತ್ತನ್ನು ಯುದ್ಧಮುಖೇನ ರಾಮಲಕ್ಷ್ಮಣರನ್ನು ಕೊಲ್ಲಲು ಪ್ರೇರೇಪಿಸಿದನು.

**ನಗರಾನ್ ನಿರ್ಯಯೌ ತೂರ್ಣಂ ಇಂದ್ರಜಿತ್ ಸಮಿತಿಂಜಯಃ ।**
**ಮಾಯಾಸೀತಾಂ ವಿನಿಕ್ಷಿಪ್ಯ ಸರ್ವೇಷಾಂ ಮೋಹನಾಯವೈ ॥ ೧೯ ॥**

ಸಮಿತಿಂಜಯಃ = ಯುದ್ಧದಲ್ಲಿ ಜಯಗೊಳಿಸುವಂತಹವನಾದ, ಇಂದ್ರಜಿತ್ = ಇಂದ್ರಜಿತ್ತು, ಸರ್ವೇಷಾಂ = ಎಲ್ಲರನ್ನೂ, ಮೋಹನಾಯವೈ = ಸಂಮೋಹನಗೊಳಿಸುವುದಕ್ಕಾಗಿ, ಮಾಯಾಸೀತಾಂ = ಮಾಯೆಯ ಸೀತೆಯನ್ನು, (ರಥೇ = ರಥದಲ್ಲಿ), ವಿನಿಕ್ಷಿಪ್ಯ = ತೆಗೆದುಕೊಂಡು, ತೂರ್ಣಂ = ತಕ್ಷಣವೇ, ನಗರಾತ್ = ಲಂಕಾಪಟ್ಟಣದಿಂದ, ನಿರ್ಯಯೌ = ಹೊರಟನು.

ಯುದ್ಧದಲ್ಲಿ ಯಾವಾಗಲೂ ಜಯಶಾಲಿಯಾಗುತ್ತಿದ್ದ ಇಂದ್ರಜಿತ್ತು ಎಲ್ಲರನ್ನೂ ಸಂಮೋಹನಗೊಳಿಸಲು ಮಾಯಾಸೀತೆಯನ್ನು ನಿರ್ಮಿಸಿ ರಥದಲ್ಲಿ ಇಟ್ಟುಕೊಂಡು ತ್ವರೆಯಾಗಿ ಲಂಕಾಪಟ್ಟಣದಿಂದ ಹೊರಟನು.

**ವಾನರೇಷ್ವಪಿ ಪಶ್ಯತ್ಸು ಹನುಮತ್ಪ್ರಮುಖೇಷು ಸಃ ।**
**ಜಘಾನ ಸೀತಾಂ ಖಡ್ಗೇನ ಶಿತೇನ ಸಮಿತಿಂಜಯಃ ॥ ೨೦ ॥**

ಹನುಮತ್ಪ್ರಮುಖೇಷು = ಹನುಮಂತ ಮುಂತಾದ ಪ್ರಮುಖ, ವಾನರೇಷು = ವಾನರರು, ಪಶ್ಯತ್ಸು ಅಪಿ = ನೋಡುತ್ತಿರುವಂತೆಯೇ, ಸಮಿತಿಂಜಯ = ಯುದ್ಧದಲ್ಲಿ ಜಯಗೊಳಿಸುವಂತಹ, ಸಃ = ಅವನು, ಶಿತೇನ = ಹರಿತವಾದ, ಖಡ್ಗೇನ = ಕತ್ತಿಯಿಂದ ಸೀತಾಂ = ಸೀತೆಯನ್ನು, ಜಘಾನ = ಕೊಂದನು.

ಹನುಮಂತ ಮುಂತಾದ ವಾನರ ಪ್ರಮುಖರು ನೋಡುತ್ತಿರುವಂತೆಯೇ ಯುದ್ಧದಲ್ಲಿ ಜಯುಗಳಿಸುವಂತಹ ಇಂದ್ರಜಿತ್ತು ಹರಿತವಾದ ಕತ್ತಿಯೊಂದರಿಂದ ಸೀತೆಯ ತಲೆಯನ್ನು ಕತ್ತರಿಸಿಹಾಕಿದನು.

**ಯುದ್ಧಂ ತ್ಯಕ್ತ್ವಾ ತತಸ್ಸರ್ವೈಃ ವಾನರೈಃ ಸಂ ಪರೀವೃತಃ ।**
**ದುಃಖಿತೋ ಹನುಮಾಂಸ್ತತ್ರ ಯತ್ರ ರಾಮೋಽವ್ರಜಲ್ಲಘು ॥ ೨೧ ॥**

ತತಃ = ನಂತರ, ಸರ್ವೈಃ = ಎಲ್ಲಾ, ವಾನರೈಃ = ಕಪಿಗಳಿಂದ, ಸಂಪರೀವೃತಃ-ಸನ್ = ಸುತ್ತುವರಿಯಲ್ಪಟ್ಟವನಾಗಿ, ಹನುಮಾನ್ = ಹನುಮಂತನು, ದುಃಖಿತಃ = ದುಃಖಿಸುತ್ತ, ಯುದ್ಧಂ = ಯುದ್ಧವನ್ನು, ತ್ಯಕ್ತ್ವಾ = ನಿಲ್ಲಿಸಿಬಿಟ್ಟು, ಯತ್ರ = ಎಲ್ಲಿ ರಾಮಃ = ರಾಮನು, ಆಸೀತ್ = ಇದ್ದನೋ, ತತ್ರ = ಅಲ್ಲಿ, ಅಲಘು = ಬೇಗನೆ, ಅವ್ರಜಿತ್ = ಹೋದನು.

ಅನಂತರ ಎಲ್ಲ ಕಪಿಗಳಿಂದ ಸುತ್ತುವರಿಯಲ್ಪಟ್ಟವನಾಗಿ ಹನುಮಂತನು ಶೋಕಿಸುತ್ತಾ ಯುದ್ಧವನ್ನು ತ್ಯಜಿಸಿ ರಾಮನು ಇದ್ದಲ್ಲಿಗೆ ಬೇಗನೆ ಹೋದನು.

**ಉಪಗಮ್ಯಾಽಬ್ರವೀದ್ ರಾಮಂ ಹನೂಮಾನ್ ನಿಖಿಲಾ ತದಾ ।**
**ಶ್ರುತ್ವಾ ವೃತ್ತಾಂತ ಮಖಿಲಂ ರಾಮೋ ಮೋಹಮವಾಪಸಃ ॥ ೨೨ ॥**

ಹನೂಮಾನ್ = ಹನುಮಂತನು, ರಾಮಂ = ರಾಮುನನ್ನು, ಉಪಗಮ್ಯ = ಸೇರಿ, ನಿಖಿಲಂ = ಎಲ್ಲವನ್ನೂ, ಅಬ್ರವೀತ್ = ಹೇಳಿದನು. ತದಾ = ಆಗ, ಸಃ-ರಾಮಃ = ಆ ರಾಮಚಂದ್ರನು, ಅಖಿಲಂ = ಎಲ್ಲಾ, ವೃತ್ತಾಂತಂ = ವರ್ತಮಾನವನ್ನೂ, ಶ್ರುತ್ವಾ = ಕೇಳಿ, ಮೋಹಂ = ಮೂರ್ಛೆಯನ್ನು, ಅವಾಪ = ಹೊಂದಿದನು.

ಹನುಮಂತನು ರಾಮನ ಹತ್ತಿರ ಹೋಗಿ ಎಲ್ಲವನ್ನೂ ಹೇಳಿದನು. ರಾಮನು ಆ ಎಲ್ಲ ಸಮಾಚಾರವನ್ನೂ ಕೇಳಿ ಮೂರ್ಛೆಯನ್ನು ಹೊಂದಿದನು.

**ವಿಭೀಷಣೋಽಥ ಸಂಪ್ರಾಪ್ಯ ದೃಷ್ಟ್ವಾ ರಾಮಂಚ ಮೂರ್ಛಿತಂ ।**
**ವಿಷಣ್ಣಾನ್ ವಾನರಾನ್ ವಾಚಾ ಸಾಂತ್ವಯನ್ನಿದಮಬ್ರವೀತ್ ॥ ೨೩ ॥**

ಅಥಃ = ನಂತರ, ವಿಭೀಷಣಃ = ವಿಭೀಷಣನು, ಸಂಪ್ರಾಪ್ಯ = ಬಂದು, ಮೂರ್ಛಿತಂ = ಮೂರ್ಛೆಹೋಗಿದ್ದ, ರಾಮಂ = ರಾಮುನನ್ನು, ವಿಷಣ್ಣಾನ್ = ದುಃಖದಿಂದ ಕೂಡಿದ, ವಾನರಾನ್ ಚ = ವಾನರರನ್ನೂ ಸಹ, ದೃಷ್ಟ್ವಾ = ನೋಡಿ, ವಾಚಾ = ಮಾತಿನಿಂದ, ಸಾಂತ್ವಯನ್ = ಸಮಾಧಾನ ಮಾಡುತ್ತಾ, ಇದಂ ಅಬ್ರವೀತ್ = ಹೀಗೆ ಹೇಳಿದನು.

ಆಗ ವಿಭೀಷಣನು ಬಂದು ಮೂರ್ಛಿತನಾಗಿದ್ದ ರಾಮಚಂದ್ರನನ್ನೂ ದುಃಖಿತರಾಗಿದ್ದ ಕಪಿಗಳನ್ನೂ ಕಂಡು ಸಮಾಧಾನ ವಾಕ್ಯಗಳನ್ನು ಈ ರೀತಿ ಹೇಳಿದನು.

**ಮಿಥ್ಯಾ ವಿಷಾದಂ ಸಂತ್ಯಜ್ಯ ಜಗನ್ನಾಯಕ ! ಹೇ ಪ್ರಭೋ ।**
**ಶೃಣು ಮೇಽಭಿಹಿತಂ ವಾಕ್ಯಂ ಜ್ಞಾತ್ವಾ ರಾವಣಿ ಮಾನಸಂ ॥ ೨೪ ॥**

ಜಗನ್ನಾಯಕ = ಜಗತ್ತಿಗೇ ಒಡೆಯನಾದಂತಹ, ಹೇ ಪ್ರಭೋ = ಎಲೈ ಸ್ವಾಮಿಯೇ, ಮಿಥ್ಯಾ ವಿಷಾದಂ = ವ್ಯರ್ಥವಾದ ದುಃಖವನ್ನು, ಸಂತ್ಯಜ್ಯ = ಬಿಟ್ಟು, ರಾವಣಿ ಮಾನಸಂ = ರಾವಣನ ಮಗನಾದ ಇಂದ್ರಜಿತ್ತಿನ ಮನಸ್ಸನ್ನು. ಜ್ಞಾತ್ವಾ = ತಿಳಿದು, ಅಭಿಹಿತಂ = ಹೇಳುವಂತಹ, ಮೇ = ನನ್ನ, ವಾಕ್ಯಂ = ಮಾತನ್ನು, ಶೃಣು = ಕೇಳು.

ಜಗತ್ತಿಗೆ ಒಡೆಯನಾದ ನನ್ನ ಸ್ವಾಮಿಯೆ ! ವ್ಯರ್ಥವಾದ ದುಃಖವನ್ನು ದೂರ ಮಾಡು ; ರಾವಣಪುತ್ರ ಇಂದ್ರಜಿತ್ತಿನ ಮನಸ್ಸನ್ನು ಅರಿತುಕೊಂಡಿರುವ ನಾನು ಹೇಳುವಂತಹ ಮಾತುಗಳನ್ನು ಆಲಿಸು.

**ದುರಾತ್ಮನಾ ಕೃತಾ ಮಾಯಾ ರಾಕ್ಷಸೇಂದ್ರ ಸುತೇನ ವೈ ।**
**ನಿಕುಂಭಿಲಾಯಾಂ ಹೋಮಂತು ಕರ್ತುಂ ತೇನಾಧುನಾಕಿಲ ॥ ೨೫ ॥**

ಅಧುನಾ = ಈಗ, ನಿಕುಂಭಿಲಾಯಾಂ = ನಿಕಂಭಿಲೆಯೆಂಬ ಜಾಗದಲ್ಲಿ, ಹೋಮಂ = ಹೋಮವನ್ನು, ಕರ್ತುಂವೈ = ಮಾಡುವುದಕ್ಕಾಗಿಯೇ, ತೇನ = ಆ, ದುರಾತ್ಮನಾ = ದುಷ್ಟನಾದ, ರಾಕ್ಷಸೇಂದ್ರ ಸುತೇನ = ರಾವಣನ ಮಗನಾದ ಇಂದ್ರಜಿತ್ತಿನಿಂದ, ಮಾಯಾ = ಮಾಯೆಯು, ಕೃತಾಕಿಲ = ಮಾಡಲ್ಪಟ್ಟಿರುವುದಷ್ಟೆ.

ಈಗ ನಿಕುಂಭಿಲೆಯೆಂಬ ಜಾಗದಲ್ಲಿ ಹೋಮವನ್ನು ಮಾಡುವುದಕ್ಕೋಸ್ಕರವಾಗಿಯೇ ದುರಾತ್ಮನಾದ ರಾವಣನ ಮಗ ಇಂದ್ರಜಿತ್ತು ಮಾಯೆಯನ್ನು ಹೂಡಿರುವುದು.

**ಲಕ್ಷ್ಮಣಂ ಪ್ರೇಷಯಾದ್ಯೈವ ಮಯಾ ಸಹ ಸಮಂತ್ರಿಣಾ ।**
**ಕೃತೇ ಹೋಮೇ ತವರಿಪುಃ 'ಅಜಯ್ಯೋ ಭವಿತಾ ಧ್ರುವಂ' ॥ ೨೬ ॥**

ಅದ್ಯ ಏವ = ಈಗಲೇ, ಸಮಂತ್ರಿಣಾ = ಮಂತ್ರಿಗಳೊಡನೆ ಸೇರಿದ, ಮಯಾ ಸಹ = ನನ್ನ ಸಂಗಡ, ಲಕ್ಷ್ಮಣಂ = ಲಕ್ಷ್ಮಣನನ್ನು, ಪ್ರೇಷಯ = ಕಳುಹಿಸು. ಹೋಮೇ = ಹೋಮವು, ಕೃತೇ = ಸಂಪೂರ್ಣವಾಗಿ ಮಾಡಲ್ಪಟ್ಟರೆ, ತವರಿಪುಃ =

ನಿನ್ನ ಶತ್ರುವು, ಧ್ರುವಂ = ನಿಶ್ಚಯವಾಗಿಯೂ ಅಜಯ್ಯ = ಅಜೇಯನಾಗಿ, ಭವಿತಾ = ಆಗಿಬಿಡುವನು.

ಈಗಲೇ ಮಂತ್ರಿಗಳೊಡನೆ ಕೂಡಿರುವ ನನ್ನ ಸಂಗಡ ಲಕ್ಷ್ಮಣನನ್ನು ಕಳುಹಿಸು. ಒಂದು ವೇಳೆ ಹೋಮವು ಸಂಪೂರ್ಣವಾಗಿ ನೆರವೇರಿಸಲ್ಪಟ್ಟರೆ ನಿನ್ನ ಶತ್ರುವಾದ ಇಂದ್ರಜಿತ್ತು ಖಂಡಿತ ಅಜೇಯನೇ ಆಗಿಬಿಡುತ್ತಾನೆ. (ಇಲ್ಲಿ ಇಂದ್ರಜಿತ್ತಿನ ಬಲದಿಂದ ರಾವಣನು ಅಜೇಯನಾಗಿಬಿಡುತ್ತಾನೆಂಬ ಅರ್ಥವೂ ಸಾಧ್ಯ. ವಿಭೀಷಣನ ಸಂಗಡ ನಾಲ್ವರು ಮಂತ್ರಿಗಳು ರಾಮನಲ್ಲಿ ಬಂದರು ಎಂದು ವಾಲ್ಮೀಕಿ ರಾಮಾಯಣದಲ್ಲಿ ಹೇಳಿದೆ.)

**ಉವಾಚ ರಾಮಃ ಸೌಮಿತ್ರಿಂ "ರಾಕ್ಷಸೇಂದ್ರಸುತಂ ಜಹಿ ।**
**ಗಚ್ಛೇತ ಶೀಘ್ರಂ ಸುಹೃದಾ ರಾವಣಸ್ಯಾನುಜೇನ" ಸಃ ॥ ೨೭ ॥**

ಸಃ ರಾಮಃ = ಆ ರಾಮನು, ಸುಹೃದಾ = ಸ್ನೇಹಿತನಾದ, ರಾವಣಸ್ಯ = ರಾವಣನ, ಅನುಜೇನ = ಸೋದರ ವಿಭೀಷಣನ ಜೊತೆ, ಶೀಘ್ರಂ = ಬೇಗನೆ, ಗಚ್ಛ = ಹೋಗು, ರಾಕ್ಷಸೇಂದ್ರ ಸುತಂ = ರಾಕ್ಷಸರಾಜನ ಮಗನಾದ ಇಂದ್ರಜಿತ್ತನ್ನು, ಜಹಿ = ಕೊಲ್ಲು (ಜಯಿಸು) ಇತಿ = ಎಂಬುದಾಗಿ, ಸೌಮಿತ್ರಿಂ ಪ್ರತಿ = ಲಕ್ಷ್ಮಣನನ್ನು ಕುರಿತು ಉವಾಚ = ಹೇಳಿದನು.

ಆ ರಾಮನು "ಸ್ನೇಹಿತನಾದ ರಾವಣಾನುಜ ವಿಭೀಷಣನೊಡನೆ ಬೇಗನೆ ಹೋಗಿ ರಾವಣನ ಮಗನಾದ ಇಂದ್ರಜಿತುವನ್ನು ಜಯಿಸು" ಎಂಬುದಾಗಿ ಲಕ್ಷ್ಮಣನಿಗೆ ಹೇಳಿದನು.

**ಲಕ್ಷ್ಮಣಸ್ತು ತದಾ ರಾಮಂ ಆಮಂತ್ರ್ಯ ಸ ವಿಭೀಷಣಃ ।**
**ನಿಕುಂಭಿಲಾಂ ಪ್ರಾಪ ತೂರ್ಣ ಮಿಂದ್ರಜಿತ್ ಯತ್ರವರ್ತತೇ ॥ ೨೮ ॥**

ತದಾ = ಆಗ, ಲಕ್ಷ್ಮಣಃ ತು = ಲಕ್ಷ್ಮಣನಾದರೋ, ರಾಮಾಯ = ರಾಮನನ್ನು, ಆಮಂತ್ರ್ಯ = ಬೀಳ್ಕೊಂಡು, ಸ ವಿಭೀಷಣಃ = ವಿಭೀಷಣನ ಜೊತೆ, ಯತ್ರ = ಯಾವ ಸ್ಥಳದಲ್ಲಿ, ಇಂದ್ರಜಿತ್ = ಇಂದ್ರಜಿತುವು, ವರ್ತತೇ = ಇರುವನೋ, ತಾಂ = ಆ, ನಿಕುಂಭಿಲಾಂ = ನಿಕುಂಭಿಲೆ ಎಂಬೆಡೆ, ತೂರ್ಣಂ = ಬೇಗನೆ, ಪ್ರಾಪ = ಸೇರಿದನು.

ಆಗ ಲಕ್ಷ್ಮಣನು ರಾಮನನ್ನು ಬೀಳ್ಕೊಂಡು ವಿಭೀಷಣನ ಜೊತೆಯಲ್ಲಿ ಯಾವ ಜಾಗದಲ್ಲಿ ಇಂದ್ರಜಿತುವು ಇರುವನೋ ಆ ನಿಕುಂಭಿಲೆ ಎಂಬ ಸ್ಥಳಕ್ಕೆ ಜಾಗ್ರತೆಯಾಗಿ ಬಂದು ಸೇರಿದನು.

**ಅದರ್ಶಯದ್ಭ್ರಾತೃಪುತ್ರಂ ಧರ್ಮಾತ್ಮಾ ಸ ವಿಭೀಷಣಃ ।**
**ಲಕ್ಷ್ಮಣೋ ಬೇದಯಾಮಾಸ ರಾಕ್ಷಸಾಂ ಶರ ಸಂಚಯೈಃ ॥ ೨೯ ॥**

ಸಃ = ಆ, ಧರ್ಮಾತ್ಮಾ = ಧರ್ಮಬುದ್ಧಿಯುಳ್ಳ, ವಿಭೀಷಣಃ = ವಿಭೀಷಣನು, ಭ್ರಾತೃಪುತ್ರಂ = ಸಹೋದರನ ಮಗನನ್ನು, ಅದರ್ಶಯತ್ = ತೋರಿಸಿದನು. ಲಕ್ಷ್ಮಣಃ = ಲಕ್ಷ್ಮಣನು, ರಾಕ್ಷಸಾನ್ = ರಾಕ್ಷಸರುಗಳನ್ನು, ಶರ ಸಂಚಯೈಃ = ಬಾಣಗಳ ಸಮೂಹದಿಂದ, ಬೇಧಯಾಮಾಸ = ಹೊಡೆದನು.

ಧರ್ಮಬುದ್ಧಿಯುಳ್ಳ ವಿಭೀಷಣನು ತನ್ನ ಸೋದರನ ಮಗನನ್ನು ಲಕ್ಷ್ಮಣನಿಗೆ ತೋರಿಸಿದನು. ಲಕ್ಷ್ಮಣನಾದರೋ ರಾಕ್ಷಸರುಗಳನ್ನು ಬಾಣಗಳ ಸಮೂಹಗಳಿಂದ ಹೊಡೆದನು.

**.ಕೃತ್ವಾ ಚಿರಂ ತತ್ರಯುದ್ಧಂ ಐಂದ್ರೇಣಾಸ್ತ್ರೇಣವೈರುಷಾ ।**
**ಶಿರಚ್ಚಿಚ್ಛೇದ ಸೌಮಿತ್ರಿಃ ದಶಾನನ ಸುತಸ್ಯಹಿ ॥ ೩೦ ॥**

ತತ್ರ = ಅಲ್ಲಿ, ಸೌಮಿತ್ರಿಃ = ಲಕ್ಷ್ಮಣನು, ಚಿರಂ = ದೀರ್ಘಕಾಲ, ಯುದ್ಧಂ ಕೃತ್ವಾ = ಯುದ್ಧವನ್ನು ಮಾಡಿ, ದಶಾನನ ಸುತಸ್ಯ = ರಾವಣನ ಮಗನ, ಶಿರಃ = ತಲೆಯನ್ನು, ಐಂದ್ರೇಣಾಸ್ತ್ರೇಣ ವೈ = ಇಂದ್ರಾಸ್ತ್ರದಿಂದಲೇ, ರುಷಾ = ಕೋಪದಿಂದ, ಚಿಚ್ಛೇದಹಿ = ಕತ್ತರಿಸಿಹಾಕಿದನಷ್ಟೆ.

ಅಲ್ಲಿ ಲಕ್ಷ್ಮಣನು ಬಹುಕಾಲ ಯುದ್ಧಮಾಡಿ ರಾವಣನ ಮಗನಾದ ಇಂದ್ರಜಿತುವಿನ ತಲೆಯನ್ನು ಇಂದ್ರಾಸ್ತ್ರದಿಂದ ಕೋಪದಿಂದ ಕತ್ತರಿಸಿದನು.

**ಸ ಸುತಸ್ಯ ವಧಂ ಶ್ರುತ್ವಾ ರಾವಣೋ ಶೋಕಕರ್ಶಿತಃ ।**
**ನಷ್ಟ ಧೈರ್ಯೋ ವಿಹ್ವಲಾಂಗಃ ವಿಲಲಾಪಾಕುಲೇಂದ್ರಿಯಃ ॥ ೩೦ ॥**

ಸಃ ರಾವಣಃ = ಆ ರಾವಣನು, ಸುತಸ್ಯ = ಮಗನ, ವಧಂ = ವಧೆಯನ್ನು, ಶ್ರುತ್ವಾ = ಕೇಳಿ, ಶೋಕಕರ್ಶಿತಃ = ದುಃಖಹೊಂದಿದವನಾಗಿ, ನಷ್ಟ ಧೈರ್ಯಃ = ಧೈರ್ಯಹೀನನಾಗಿಯೂ, ವಿಹ್ವಲಾಂಗಃ = ಅಂಗಗಳ ಮೇಲಿನ ಹಿಡಿತವನ್ನು ಕಳೆದುಕೊಂಡವನಾಗಿಯೂ, ಆಕುಲೇಂದ್ರಿಯಃ = ದಿಙ್ಮೂಢನಾಗಿಯೂ, ವಿಲಲಾಪ = ಪ್ರಲಾಪಿಸಿದನು.

ರಾವಣನು ಮಗನ ವಧೆಯ ವೃತ್ತಾಂತವನ್ನು ಕೇಳಿ ತಿಳಿದು ಕೋಪದಿಂದ ಕೂಡಿದವನೂ, ಧೈರ್ಯಹೀನನೂ, ವಿಹ್ವಲಾಂಗನೂ ಮತ್ತು ದಿಗ್ಮೂಢನೂ ಆಗಿ ಪ್ರಲಾಪಿಸತೊಡಗಿದನು.

**" ನಿರರ್ಥಕಂತು ಮಜ್ಜನ್ಮ ಜಲ್ಪಿಂತಂ ಚ ನಿರರ್ಥಕಂ ।**
**ಯೇನಾಹಮದ್ಯ ಪಶ್ಯಾಮಿ ಹತಮಿಂದ್ರಜಿತಂ ರಣೇ ॥ ೩೨**

ಯೇನ=ಯಾವುದರಿಂದ, ಅಹಂ=ನಾನು, ಅದ್ಯ=ಈಗ, ರಣೇ=ಯುದ್ಧದಲ್ಲಿ, ಇಂದ್ರಜಿತಂ=ಇಂದ್ರಜಿತುವನ್ನು, ಹತಂ=ಕೊಲ್ಲಲ್ಪಟ್ಟವನಾಗಿ, ಪಶ್ಯಾಮಿ=ನೋಡುತ್ತಿರುವೆನೋ, (ತೇನ=ಅದರಿಂದ), ಮಜ್ಜನ್ಮತು=ನನ್ನ ಜನ್ಮವಾದರೋ ನಿರರ್ಥಕಂ=ವ್ಯರ್ಥವಾಯಿತು. ಜಲ್ಪಿತಂ ಚ=ತಾಳ್ಮೆಯನ್ನು ಹೇಳಿದ್ದೂ ಕೂಡ ನಿರರ್ಥಕಂ=ವ್ಯರ್ಥವಾಯಿತು.

" ಯಾವುದರಿಂದ ನಾನು ಈಗ ಯುದ್ಧದಲ್ಲಿ ಇಂದ್ರಜಿತುವನ್ನು ಕೊಲ್ಲಲ್ಪಟ್ಟವನನ್ನಾಗಿ ನೋಡುತ್ತಿರುವೆನೋ ಅದರಿಂದ ನನ್ನ ಜನ್ಮವು ನಿರರ್ಥಕವಾಯಿತು. ತಾಳ್ಮೆಯನ್ನು ಹೇಳಿದ್ದೂ ಕೂಡ ನಿರರ್ಥಕವಾಯಿತು.

**ಕ್ವ ಗತೋऽಸಿ ಹತಃ ಶೂರ ! ಮಾನುಷೇಣ ಪದಾತಿಗಾ ।**
**ರಾಜ್ಯಾದ್ ಭ್ರಷ್ಟೇನ ದೀನೇನ ತ್ಯಕ್ತ್ವಾ ಮಾಂ ಪುತ್ರ ! ಜೀವಿತಂ " ॥ ೩೩**

ಶೂರ=ಶೂರನಾದ, ಪುತ್ರ=ಎಲೈ ಮಗನೇ ! ಪದಾತನ್=ಕಾಲಿನಿಂದ ನಡೆದು ಬರುತ್ತಿರುವ, ರಾಜ್ಯಾತ್=ರಾಜ್ಯದಿಂದ. ಭ್ರಷ್ಟೇನ=ತೊರೆಯಲ್ಪಟ್ಟಿರುವ ದೀನೇನ=ದುಃಖಿತನಾದ, ಮಾನುಷೇಣ=ಮನುಷ್ಯನಾದ ಲಕ್ಷ್ಮಣನಿಂದ, ಹತಃ ಕೊಲ್ಲಲ್ಪಟ್ಟು, ಜೀವಿತಂ=ಜೀವದಿಂದ ಇರುವ, ಮಾಂ=ನನ್ನನ್ನೂ, ತ್ಯಕ್ತ್ವಾ=ಬಿಟ್ಟು, ಕ್ವ=ಎಲ್ಲಿ, ಗತಃ ಅಸಿ=ಹೋಗಿರುತ್ತೀಯೆ.

ಶೂರನಾದ ಎಲೈ ಮಗನೆ ! ಕಾಲಾಳಾದ, ರಾಜ್ಯಭ್ರಷ್ಟನಾದ, ದೀನನಾದ ಕೇವಲ ಒಬ್ಬ ಮನುಷ್ಯಪ್ರಾಣಿಯಿದ ಕೊಲ್ಲಲ್ಪಟು, ಜೀವದಿಂದ ಇರುವ ನನ್ನನ್ನು ಕೂಡ ಬಿಟ್ಟು ಎಲ್ಲಿಗೆ ಹೊರಟುಹೋದೆ ?

**ಇಂದ್ರಂ ಜಿತ್ವಾತು ತಂ ಬಧ್ವಾ ಲಂಕಾಮಾನೀಯವೈ ಬಲಾತ್ ।**
**ಅಕರೋಸ್ತ್ವಂ ಪ್ರತಾಪೇನ ಕಾರಾಗೃಹ ನಿವಾಸಿನಮ್ ॥ ೩೪**

ತ್ವಂತು=ನೀನಾದರೋ, ಇಂದ್ರಂ=ಇಂದ್ರನನ್ನು, ಜಿತ್ವಾ=ಗೆದ್ದು, ತಂ=ಅವನನ್ನು, ಬಧ್ವಾ=ಕಟ್ಟಿಹಾಕಿ, ಬಲಾತ್=ಬಲಾತ್ಕಾರದಿಂದ, ಲಂಕಾಂ=ಲಂಕಾಪಟ್ಟಣಕ್ಕೆ, ಆನೀಯ=ತೆಗೆದುಕೊಂಡು ಬಂದು, ಪ್ರತಾಪೇನ=ಪರಾಕ್ರಮದಿಂದ ಕಾರಾಗೃಹನಿವಾಸಿನಂ=ಸೆರೆವಾಸಿಯನ್ನಾಗಿ, ಅಕರೋ ವೈ=ಮಾಡಿದ್ದೆಯಲ್ಲವೆ ?

ನೀನೋ ಇಂದ್ರನನ್ನು ಗೆದ್ದು ಅವನನ್ನು ಬಂಧಿಸಿ ಬಲಾತ್ಕಾರದಿಂದ ಲಂಕೆಗೆ ತಂದು ಪರಾಕ್ರಮದಿಂದ ಸೆರೆಯಲ್ಲಿ ಇರಿಸಿದ್ದೆಯಲ್ಲವೆ ?

**ಮೋಚಯಾಮಾಸ ಬ್ರಹ್ಮಾ ತ್ವಂ ಸಾಂತ್ವಯಿತ್ವಾಽಮರಾಧಿಪಂ ।**
**ತಾದೃಕ್ ತ್ವಂ ಪುತ್ರ ! ಮಾಂ ತ್ಯಕ್ತ್ವಾ ಗತೋಽದ್ಯ ಸು ದುರಾಸದಃ ॥ ೩೫ ॥**

ಬ್ರಹ್ಮಾ = ಬ್ರಹ್ಮನು, ತ್ವಾಂ = ನಿನ್ನನ್ನು, ಸಾಂತ್ವಯಿತ್ವಾ = ಸಮಾಧಾನ ಪಡಿಸಿ, ಅಮರಾಧಿಪಂ = ದೇವತೆಗಳ ಅಧಿಪತಿಯಾದ ಇಂದ್ರನನ್ನು, ಮೋಚಯಾ-ಮಾಸ = ಬಿಡಿಸಿದನು. ತಾದೃಕ್ = ಅಂತಹ, ಪುತ್ರ = ಮಗನೇ, ತ್ವಂ = ನೀನು ! ಮಾಂ = ನನ್ನನ್ನು, ತ್ಯಕ್ತ್ವಾ = ಬಿಟ್ಟು, ಅದ್ಯ – ಈಗ, ಸುದುರಾಸದಃ=ಹೊಂದಲಸಾಧ್ಯನು, ಗತಃ = ಆಗಿಬಿಟ್ಟೆ

ಆಗ ಬ್ರಹ್ಮನು ನಿನ್ನನ್ನು ಸಮಾಧಾನಪಡಿಸಿ ಇಂದ್ರನನ್ನು ಬಿಡಿಸಿದನು. ಅಂತಹವನು ನೀನು ಮಗನೆ ! ನನ್ನನ್ನು ಬಿಟ್ಟು ಈಗ ಮತ್ತೆ ಹೊಂದಲು ಅಸಾಧ್ಯ ನಾಗಿಬಿಟ್ಟೆಯಲ್ಲ !”

**ಕಿಂ ಕರಿಷ್ಯಾಮಿ ಅಹಂ ಪುತ್ರ ! ಕ್ವ ಗಚ್ಛಾಮಿ ! ವದಾಧುನಾ ।**
**ನಯುಮಾಂ ಯತ್ರಗಂತಾಸಿ ತತ್ರ ತೇನ ವಿಲಂಬಿತಂ ॥ ೩೬ ॥**

ಪುತ್ರ = ಮಗನೇ, ಅಹಂ = ನಾನು, ಅಧುನಾ = ಈಗ, ಕಿಂ ಕರಿಷ್ಯಾಮಿ = ಏನು ಮಾಡಲಿ, ಕ್ವ ಗಚ್ಛಾಮಿ = ಎಲ್ಲಿ ಹೋಗಲಿ, ವದ = ಹೇಳು. ಯತ್ರ = ಎಲ್ಲಿಗೆ, ಗಂತಾಸಿ = ಹೋಗುವೆಯೋ, ತತ್ರ = ಅಲ್ಲಿಗೆ, ನ ವಿಲಂಬಿತಂ = ವಿಳಂಬಮಾಡದೆ, ಮಾಂ = ನನ್ನನ್ನೂ, ನಯ = ಕರೆದೊಯ್ಯಿ.

ಎಲೈ ಮಗನೇ ! ನಾನು ಈಗ ಏನುಮಾಡಲಿ ? ಎಲ್ಲಿಗೆ ಹೋಗಲಿ ? ನೀನು ಎಲ್ಲಿಗೆ ಹೋಗುವೆಯೋ ಅಲ್ಲಿಗೆ ನನ್ನನ್ನೂ ವಿಳಂಬಮಾಡದೆ ಕರೆದುಕೊಂಡು ಹೋಗು.

**ಲೋಕೇಷು ತ್ವತ್ಸಮೋನಾಸ್ತಿ ತಾದೃಶಸ್ಯ ಪಿತುರ್ಮಮ ।**
**ಇತ್ಯಾಶಯಾಸ್ಥಿತಂ ಪುತ್ರ ! ಗರ್ವಿತೇನ ಮಯಾಽತ್ರಹಿ ॥ ೩೭ ॥**

ಪುತ್ರ = ಎಲೈ ಮಗನೇ ! ತಾದೃಶಸ್ಯ = ನನ್ನಂತಹ ಪಿತುಃ = ತಂದೆಯಾದ, ಮಮ = ನನಗೆ, ತ್ವತ್ಸಮಃ = ನಿನ್ನ ಸಮಾನನಾದ, ಪುತ್ರ = ಮಗನು, ಲೋಕೇಷು = ಲೋಕಗಳಲ್ಲಿಯೇ, ನ ಅಸ್ತಿ = ಇಲ್ಲವು. ಇತಿ = ಎಂಬುವ, ಆಶಯಾ = ನಂಬಿಕೆಯಿಂದ, ಗರ್ವಿತೇನ = ಗರ್ವದಿಂದ ಕೂಡಿದ, ಮಯಾ = ನನ್ನಿಂದ, ಅತ್ರ = ಇಲ್ಲಿ, ಸ್ಥಿತಂ ಹಿ = ಇರಲ್ಪಟ್ಟಿತ್ತಲ್ಲವೆ ?

ಎಲೈ ಮಗನೆ! ಈ ರೀತಿಯಾದ ತಂದೆಯಾದ ನನಗೆ ನಿನ್ನ ಸಮನಾದ ಮಗನ ಲೋಕಗಳಲ್ಲಿಯೇ ಇಲ್ಲ ಎನ್ನುವ ನಂಬಿಕೆಯಿಂದ ಗರ್ವಿಷ್ಠನಾಗಿ ಇದ್ದೆನು.

**ಧೂಮ್ರಾಕ್ಷೋ ವಜ್ರದಂಷ್ಟ್ರಶ್ಚ ಕುಂಭಕರ್ಣ ಪ್ರತಾಪವಾನ್ ।**
**ರಾಕ್ಷಸಾ ನಿಹತಾಸ್ಸರ್ವೇ ಪ್ರಹಸ್ತಪ್ರಮುಖಾ ಅಪಿ ॥ ೩೮ ।**

ಧೂಮ್ರಾಕ್ಷಃ = ಧೂಮ್ರಾಕ್ಷನೂ, ವಜ್ರದಂಷ್ಟ್ರಃ = ವಜ್ರದಂಷ್ಟ್ರನೂ, ಪ್ರತಾಪವಾನ್ = ಪ್ರತಾಪಶಾಲಿಯಾದ, ಕುಂಭಕರ್ಣಃ ಚ = ಕುಂಭಕರ್ಣನೂ, ಪ್ರಹಸ್ತಪ್ರಮುಖಾಃ = ಪ್ರಹಸ್ತನೇ ಮೊದಲಾದ, ಸರ್ವೇ = ಎಲ್ಲಾ, ರಾಕ್ಷಸಾಃ ಅಪಿ = ರಾಕ್ಷಸರೂ ಕೂಡ, ನಿಹತಾಃ = ಸಂಹರಿಸಲ್ಪಟ್ಟರು.

ಧೂಮ್ರಾಕ್ಷ, ವಜ್ರದಂಷ್ಟ್ರ, ಶೂರ ಕುಂಭಕರ್ಣ ಮತ್ತು ಪ್ರಹಸ್ತ ಮೊದಲಾದ ಎಲ್ಲಾ ರಾಕ್ಷಸರೂ ಸಂಹರಿಸಲ್ಪಟ್ಟರು.

**ಅನಾದೃತ್ಯ ತು ತಾನ್ ಸರ್ವಾನ್ ರಾಕ್ಷಸಾನ್ ಪ್ರಹೃತಾನಪಿ ।**
**ಅವಷ್ಟಭ್ಯ ಬಲಂ ಪುತ್ರ ! ಸುಖೇನಾವಸ್ಥಿತಂ ತವ ॥ ೩೯ ॥**

ಪುತ್ರ = ಎಲೈ ಮಗನೆ! ಪ್ರಹೃತಾನ್ = ಕೊಲ್ಲಲ್ಪಟ್ಟ, ತಾನ್ = ಆ, ಸರ್ವಾನ್ = ಎಲ್ಲಾ, ರಾಕ್ಷಸಾನ್ = ರಾಕ್ಷಸರುಗಳನ್ನು, ಅನಾದೃತ್ಯ ಅಪಿ = ಗಮನಿಸದೇ, (ಮಯಾ = ನನ್ನಿಂದ), ತವ ಬಲಂ = ನಿನ್ನ ಬಲವನ್ನು, ಅವಷ್ಟಭ್ಯ = ನಂಬಿ ಸುಖೇನ = ಸುಖದಿಂದ, ಅವಸ್ಥಿತಂ = ಇರಲ್ಪಟ್ಟಿತು

ಎಲೈ ಮಗನೇ! ಕೊಲ್ಲಲ್ಪಟ್ಟ ಆ ಎಲ್ಲಾ ರಾಕ್ಷಸರುಗಳನ್ನೂ ಗಮನಿಸದೇ ನಿನ್ನ ಬಲವನ್ನೇ ನಂಬಿಕೊಂಡು ಇದ್ದೆನು.

**ಇತ್ಯೇವಂ ಬಹುಧಾ ತತ್ರ ವಿಲಪ್ಯ ಸ ತು ರಾವಣಃ ।**
**ಅಂತರ್ನಿಯಮ್ಯ ದುಃಖಾನಿ ಕೋಪಂ ಚಕ್ರೇ ಸುದಾರುಣಂ ॥ ೪೦ ॥**

ಸಃ ರಾವಣಃ ತು = ಆ ರಾವಣನಾದರೋ, ಇತಿ ಏವಂ = ಈ ರೀತಿಯಾಗಿ, ಬಹುಧಾಃ = ಬಹುವಾಗಿ, ತತ್ರ = ಅಲ್ಲಿ, ವಿಲಪ್ಯ = ಪ್ರಲಾಪಿಸಿ, ದುಃಖಾನಿ = ದುಃಖಗಳನ್ನು, ಅಂತಃ = ಮನಸ್ಸಿನಲ್ಲಿ, ನಿಯಮ್ಯ = ಅಡಗಿಸಿಕೊಂಡು, ಸುದಾರುಣಂ = ಭಯಂಕರವಾದ, ಕೋಪಂ = ಕೋಪವನ್ನು, ಚಕ್ರೇ = ಹೊಂದಿದನು.

ಆ ರಾವಣನಾದರೋ ಈ ರೀತಿಯಾಗಿ ಅತಿಯಾಗಿ ಅಲ್ಲಿ ಪ್ರಲಾಪಿಸಿದ ನಂತರ

ದುಃಖವನ್ನು ಮನಸ್ಸಿನಲ್ಲಿಯೇ ಅಡಗಿಸಿಕೊಂಡು ಭಯಂಕರವಾದ ಕೋಪವನ್ನು ತಾಳಿದನು.

**ರಥಂ ಸೂತ ! ಮಮಾಗ್ರೇತ್ವಂ ಕ್ಷಿಪ್ರಂ ಕುರುಜಯೈಷಿಣಃ ।**
**ರಾಮಂ ಸಲಕ್ಷ್ಮಣಂ ಹಂತುಂ ನಿರ್ಗಮಿಷ್ಯಾಮ್ಯಹಂ ಗೃಹಾತ್ ॥ ೪೧ ॥**

ಸೂತ = ಎಲೈ ಸಾರಥಿಯೇ, ತ್ವಂ = ನೀನು, ಜಯೈಷಿಣಃ = ವಿಜಯವನ್ನು ಅಪೇಕ್ಷಿಸುವ, ಮಮ = ನನ್ನನ್ನು, ಅಗ್ರೇ = ಮುಂದುಗಡೆ, ಕ್ಷಿಪ್ರಂ = ಬೇಗನೆ, ರಥಂ = ರಥವನ್ನು, ಕುರು = ಇಡು (ತೆಗೆದುಕೊಂಡು ಬಾ), ಅಹಂ = ನಾನು, ಸಲಕ್ಷ್ಮಣಂ = ಲಕ್ಷ್ಮಣನೊಡನೆ, ರಾಮಂ = ರಾಮನನ್ನು, ಹಂತುಂ = ಕೊಲ್ಲಲು, ಗೃಹಾತ್ = ಮನೆಯಿಂದ, ನಿರ್ಗಮಿಷ್ಯಾಮಿ = ಹೋಗುತ್ತೇನೆ.

ಎಲೈ ಸಾರಥಿಯೇ ! ನೀನು ವಿಜಯವನ್ನು ಅಪೇಕ್ಷಿಸುವ ನನ್ನ ಮುಂದೆ ರಥವನ್ನು ತಂದು ನಿಲ್ಲಿಸು. ನಾನೀಗ ಲಕ್ಷ್ಮಣ ಸಮೇತನಾಗಿ ರಾಮಚಂದ್ರನನ್ನು ಕೊಲ್ಲಲು ಮನೆಯಿಂದ ಹೊರಡುತ್ತೇನೆ.

**ಇತ್ಯುಕ್ತ್ವಾ ರಥಮಾರುಹ್ಯ ಶೀಘ್ರಂ ಸಾರಥಿ ವಾಹಿತಂ ।**
**ರಾಮೇಣ ಸಹ ಸಂಗಮ್ಯ ಯುದ್ಧಂ ಚಕ್ರೇ ಸುದಾರುಣಂ ॥ ೪೨ ॥**

ಇತಿ = ಹೀಗೆ, ಉಕ್ತ್ವಾ = ಹೇಳಿ, ಸಾರಥಿವಾಹಿತಂ = ಸಾರಥಿಯಿಂದ ತರಲ್ಪಟ್ಟ ರಥಂ = ರಥವನ್ನು, ಶೀಘ್ರಂ = ಶೀಘ್ರವಾಗಿ, ಆರುಹ್ಯ = ಏರಿ, ರಾಮೇಣ ಸಹ = ರಾಮನ ಸಂಗಡ, ಸಂಗಮ್ಯ = ಸಂಧಿಸಿ, ಸುದಾರುಣಂ = ಘೋರವಾದ, ಯುದ್ಧಂ = ಯುದ್ಧವನ್ನು, ಚಕ್ರೇ = ಮಾಡಿದನು.

ಹೀಗೆ ಹೇಳಿ ಸಾರಥಿಯಿಂದ ತರಲ್ಪಟ್ಟ ರಥವನ್ನು ತ್ವರೆಯಾಗಿ ಹತ್ತಿ ರಾಮನ ಸಂಗಡ ಸೇರಿ ಘೋರವಾದ ಯುದ್ಧವನ್ನು ಮಾಡಿದನು.

**ತತೋ ಮಾತಲಿನಾಽಽನೀತಂ ರಥಮೈಂದ್ರಂ ಸಮಾರುಹನ್ ? ।**
**ರರಾಜ ರಾಮೋ ಧರ್ಮಾತ್ಮಾ ಹ್ಯುದಯಸ್ಥೋ ಯಥಾರವಿಃ ॥ ೪೩ ॥**

ತತಃ = ಅನಂತರ, ಮಾತಲಿನಾ = ಮಾತಲಿಯಿಂದ, ಆನೀತಂ = ತರಲ್ಪಟ್ಟ, ಐಂದ್ರಂ = ಇಂದ್ರನ, ರಥಂ = ರಥವನ್ನು, ಸಮಾರುಹನ್ = ಹತ್ತಿ, ಧರ್ಮಾತ್ಮಾ = ಧರ್ಮಾತ್ಮನಾದ, ರಾಮಃ = ರಾಮಚಂದ್ರನು, ಉದಯಸ್ಥಃ = ಉದಯಗಿರಿಯಲ್ಲಿರುವ, ರವಿಃ ಯಥಾ = ಸೂರ್ಯನು ಹೇಗೋ ಹಾಗೆ, ರರಾಜ = ಪ್ರಕಾಶಿಸಿದನು.

ನಂತರ ಮಾತಲಿಯಿಂದ ತರಲ್ಪಟ್ಟ ಇಂದ್ರನ ರಥವನ್ನು ಹತ್ತಿ ಧರ್ಮಾತ್ಮನಾ ರಾಮಚಂದ್ರನು ಉದಯಾದ್ರಿಯಲ್ಲಿನ ರವಿಯಂತೆ ಪ್ರಕಾಶಿಸಿದನು.

**ಚಕಾರ ಯುದ್ಧಂ ತುಮುಲಂ ದೇವ ಬೃಂದೇ ಚ ಪಶ್ಯತಿ ।**
**ಸೀತಾಹರಣಜಾತ್ ಕೋಪಾತ್ ರಾಮೋ ಧರ್ಮಭೃತಾಂ ವರಃ ॥ ೪೪**

ಧರ್ಮಭೃತಾಂ = ಧರ್ಮವನ್ನು ಕೈಬಿಡದೇ ಇರುವವರಲ್ಲಿ, ವರಃ = ಶ್ರೇಷ್ಠನಾದ ರಾಮಃ = ರಾಮನು, ಸೀತಾಹರಣಜಾತ್ = ಸೀತಾಪಹರಣದಿಂದ ಉಂಟಾದ ಕೋಪಾತ್ = ಕೋಪದಿಂದ ಕೂಡಿ. ಚ = ಮತ್ತು, ದೇವಬೃಂದೇ = ದೇವತೆಗ ಸಮೂಹವು, ಪಶ್ಯತಿ ಸತಿ = ನೋಡುತ್ತಿರಲಾಗಿ, ತುಮುಲಂ = ಪರಸ್ಪರವಾಗಿ ಯುದ್ಧಂ = ಯುದ್ಧವನ್ನು, ಚಕಾರ = ಮಾಡಿದನು.

ಧರ್ಮಾತ್ಮರಲ್ಲಿ ಶ್ರೇಷ್ಠನಾದ ರಾಮಚಂದ್ರನು ಸೀತಾಪಹರಣದಿಂದ ಏರ್ಪಟ್ಟ ಕೋಪದಿಂದ, ದೇವತೆಗಳ ಸಮೂಹವು ನೋಡುತ್ತಿರಲಾಗಿ ಪರಸ್ಪರವಾದ ಯುದ್ಧ ವನ್ನು ಮಾಡಿದನು.

**ಅಥಾಗಸ್ತ್ಯಸ್ಯ ವಚನಾತ್ ರಾವಣಂ ಲೋಕ ಕಂಟಕಂ ।**
**ಜಘಾನ ರಾಮೋ ಲಕ್ಷ್ಮೀವಾನ್ ಬ್ರಾಹ್ಮಣಾಸ್ತ್ರೇಣ ತಂ ರಣೇ ॥ ೪೫**

ಅಥ = ಅನಂತರ, ಅಗಸ್ತ್ಯಸ್ಯ = ಅಗಸ್ತ್ಯಋಷಿಗಳ, ವಚನಾತ್ = ಆದೇಶದಂ ತಂ = ಆ, ಲೋಕ ಕಂಟಕಂ = ಲೋಕಗಳಿಗೆ ಮುಳ್ಳಿನೋಪಾದಿ ಇದ್ದ, ರಾವಣಂ = ರಾವಣನನ್ನು, ಲಕ್ಷ್ಮೀವಾನ್ = ಲಕ್ಷ್ಮೀಪತಿಯಾದ, ರಾಮಃ = ರಾಮನು, ಬ್ರಾಹ್ಮಣಾ ಸ್ತ್ರೇಣ = ಬ್ರಹ್ಮಾಸ್ತ್ರದ ಅನುಸಂಧಾನದಿಂದ, ಜಘಾನ = ಸಂಹಾರ ಮಾಡಿದನು.

ಅನಂತರ ಅಗಸ್ತ್ಯಮುನಿಗಳ ಮಾತಿನಂತೆ ಆ ಲೋಕ ಕಂಟಕನಾಗಿದ್ದ ರಾವಣ ನನ್ನು ಲಕ್ಷ್ಮೀವಲ್ಲಭನಾದ ರಾಮಚಂದ್ರನು ಬ್ರಹ್ಮಾಸ್ತ್ರದಿಂದ ಸಂಹಾರ ಮಾಡಿದನು.

**ಮಂಡೋದರೀ ವಧಂ ಶ್ರುತ್ವಾ ಭರ್ತುಃ ಪ್ರಿಯತರಸ್ಯಸಾ ।**
**ವಿಲಲಾಪ ರಣಂ ಗತ್ವಾ ಕುರರೀವ ಭೃಶಾತುರಾ ॥ ೪೬**

ಭೃಶಾತುರಾ ಸಾ = ಬಹಳವಾಗಿ ಆತುರಳಾದ ಆ ಯಾವ, ಮಂಡೋದರೀ = ಮಂಡೋದರಿಯು, ಪ್ರಿಯಕರಸ್ಯ = ಪ್ರೀತಿಪಾತ್ರನಾದ, ಭರ್ತುಃ = ಪತಿದೇವನ ವಧಂ = ವಧೆಯ ಸಮಾಚಾರವನ್ನು, ಶ್ರುತ್ವಾ = ಕೇಳಿ, ರಣಂಪ್ರತಿ = ಯುದ್ಧರಂಗ ವನ್ನು ಕುರಿತು. ಗತ್ವಾ = ಹೋಗಿ. ಕುರರೀ ಇವ = ಚಕ್ರವಾಕ ಪಕ್ಷಿಯಂತೆ, ವಿ ಲಾಪ = ಪ್ರಲಾಪಿಸಿದಳು.

ಬಹಳವಾಗಿ ಆತುರಳಾದ ಆ ಯಾವ ಮಂಡೋದರಿಯು ಪ್ರಿಯತಮನಾದ ಪತಿ ದೇವನ ವಧೆಯ ವೃತ್ತಾಂತವನ್ನು ಕೇಳಿ ಯುದ್ಧರಂಗಕ್ಕೆ ಬಂದು ಚಕ್ರವಾಕ ಪಕ್ಷಿ ಯಂತೆ ಶೋಕಿಸಿದಳು.

**ವಿಭೀಷಣೋಽಥ ರಾಮೇಣ ಸಂದಿಷ್ಟಃ ಸಹರಾಕ್ಷಸೈಃ ।**
**ಚಕಾರ ದಹನಂ ತಸ್ಯ ರಾವಣಸ್ಯ ಗತಾಯುಷಃ** ॥ ೪೭ ॥

ಅಥ = ಅನಂತರ, ರಾಮೇಣ = ರಾಮನಿಂದ, ಸಂದಿಷ್ಟಃ = ಆಜ್ಞೆಮಾಡಲ್ಪಟ್ಟ, ವಿಭೀಷಣಃ = ವಿಭೀಷಣನು, ಗತಾಯುಷಃ = ಗತಿಸಿದ, ತಸ್ಯ = ಆ, ರಾವಣಸ್ಯ = ರಾವಣನ, ದಹನಂ = ದಹನಕ್ರಿಯೆಯನ್ನು, ರಾಕ್ಷಸೈಃ ಸಹ = ರಾಕ್ಷಸರ ಜೊತೆಗೂಡಿ, ಚಕಾರ = ಮಾಡಿದನು.

ರಾಮನಿಂದ ಆಜ್ಞೆ ಮಾಡಲ್ಪಟ್ಟ ವಿಭೀಷಣನು ಗತಿಸಿದ ರಾವಣನ ದಹನಕ್ರಿಯೆ ಯನ್ನು ರಾಕ್ಷಸರ ಜೊತೆಗೂಡಿ ಮಾಡಿದನು.

**ಅಥಾಽಗ್ನಿ ವಚನಾತ್ ಸೀತಾಂ ರಾಮೋ ವೀಕ್ಷ್ಯ ಸುನಿರ್ಮಲಾಂ ।**
**ಸಂದಿಷ್ಟೋ ದೇವಬೃಂದೈಶ್ಚ ಜಗ್ರಾಹ ಪಿತೃಸನ್ನಿಧೌ** ॥ ೪೮ ॥

ಅಥ = ನಂತರ, ರಾಮಃ = ರಾಮನು, ಅಗ್ನಿವಚನಾತ್ = ಅಗ್ನಿಯ ಮಾತಿ ನಂತೆ, ಸೀತಾಂ = ಸೀತೆಯನ್ನು, ಸು ನಿರ್ಮಲಾಂ = ದೋಷವಿಲ್ಲದವಳನ್ನಾಗಿ, ವೀಕ್ಷ್ಯ = ಕಂಡು, ದೇವಬೃಂದೈಶ್ಚ = ದೇವಗಣಗಳಿಂದ ಕೂಡಿ, ಸಂದಿಷ್ಟಃ = ಸೂಚಿಸಲ್ಪಟ್ಟವ ನಾಗಿ, ಪಿತೃಸನ್ನಿಧೌ = ತಂದೆಯ ಸಾನ್ನಿಧ್ಯದಲ್ಲಿ, ಜಗ್ರಾಹ = ಪರಿಗ್ರಹಿಸಿದನು.

ಅನಂತರದಲ್ಲಿ ರಾಮಚಂದ್ರನು ಅಗ್ನಿಯ ಮಾತಿನಿಂದ ಸೀತೆಯನ್ನು ದೋಷವಿಲ್ಲ ದವಳೆಂಬುದಾಗಿ ಕಂಡುಕೊಂಡು ದೇವವೃಂದದಿಂದಲೂ ಸೂಚಿಸಲ್ಪಟ್ಟವನಾಗಿ ತಂದೆಯ ಸಾನ್ನಿಧ್ಯದಲ್ಲಿ ಪರಿಗ್ರಹಿಸಿದನು.

**"ತವೈವಯುಕ್ತಂ ಕರ್ಮೈತತ್ ಸರ್ವಲೋಕ ಭಯಂಕರಮ್ ।**
**ಯದ್ವೈದೇಹ್ಯಾಃ ಕೃತೇ ರಾಮ ! ಸಾತುಲಕ್ಷ್ಮೀರ್ಭವಾನ್ ಸ್ವಭೂಃ"** ॥ ೪೯ ॥

ರಾಮ = ರಾಮನೇ, ವೈದೇಹ್ಯಾಃಕೃತೇ = ಸೀತೆಗಾಗಿ ಮಾಡಲ್ಪಟ್ಟ, ಸರ್ವ ಲೋಕ ಭಯಂಕರಂ = ಎಲ್ಲಾ ಲೋಕಕ್ಕೆ ಭಯಂಕರವೆನಿಸಿದ, ಯತ್ ಕರ್ಮ = ಯಾವ ಕಾರ್ಯವು, ಏ ತತ್ ತವ ಏವ ಯುಕ್ತಂ = ಇದು ನಿನಗೇ ಸರಿಯಾದದ್ದು. ಸಾತು = ಅವಳೋ, ಲಕ್ಷ್ಮೀಃ = ಸಾಕ್ಷಾತ್ ಮಹಾಲಕ್ಷ್ಮಿಯು, ಭವಾನ್ = ನೀನೋ, ಸ್ವ ಭೂಃ = ಸ್ವಯಂ ಜನಿಸುವ ಮಹಾವಿಷ್ಣುವು.

"ಎಲೈ ರಾಮನೆ! ಸೀತೆಗಾಗಿ ಮಾಡಲ್ಪಟ್ಟ ಸರ್ವಲೋಕ ಭಯಂಕರವಾ ಯಾವ ಈ ಕಾರ್ಯವು ಇದೆಯೋ ಅದು ನಿನಗೇ ಸರಿಯಾದದ್ದು. ಏತಕ್ಕೆಂದರೆ ಅವಳ ಮಹಾಲಕ್ಷ್ಮಿ ನೀನು ಮಹಾವಿಷ್ಣುವು."

**ಇತ್ಯೇವಂ ದೇವ ಸಂಘೈಶ್ಚ ಮುನಿಭಿಶ್ಚಾಭಿ ಪೂಜಿತಃ ।**
**ಲಕ್ಷ್ಮಣಶ್ಚ ತು ತೋಷಾಥ ರಾಮೋ ವಿಶ್ವಾಸ ಮಾಯಯೌ ॥ ೫೦ ।**

ಇತ್ಯೇವಂ=ಈ ರೀತಿಯಾಗಿ, ದೇವ ಸಂಘೈಃ=ದೇವಗಣಗಳಿಂದಲೂ, ಮುನಿಭಿಃ ಚ=ಋಷಿಗಳಿಂದಲೂ ಸಹ, ಅಭಿ ಪೂಜಿತಃ = ಕೊಂಡಾಡಲ್ಪಟ್ಟ, ರಾಮಃ = ರಾಮಚಂದ್ರನು, ವಿಶ್ವಾಸಂ = ನಂಬಿಕೆಯನ್ನು, ಆಯಯೌ = ಹೊಂದಿದನು ಅಥ=ನಂತರ, ಲಕ್ಷ್ಮಣಃ ಚ=ಲಕ್ಷ್ಮಣನೂ ಕೂಡ, ತುತೋಷ=ಸಂತೋಷ ಹೊಂದಿದನು.

ಈ ರೀತಿಯಾಗಿ ದೇವತೆಗಳ ಸಮೂಹದಿಂದಲೂ ಋಷಿವರ್ಯರುಗಳಿಂದಲೂ ಕೂಡ ಪ್ರಶಂಸೆ ಹೊಂದಿದ ರಾಮನು ನಂಬಿಕೆ ಹೊಂದಿದನು. ಲಕ್ಷ್ಮಣನೂ ಸಹ ಸಂತೋಷಗೊಂಡನು.

**ವಿಭೀಷಣಸ್ಯ ಧರ್ಮಾತ್ಮ ಸತ್ಯಸಂಧ ಉದಾರಧೀಃ ।**
**ಕಾರಯಾಮಾಸ ಲಕ್ಷ್ಮೀವಾನ್ ಅನುಜೇನಾಭಿಷೇಚನಂ ॥ ೫೧ ॥**

ಧರ್ಮಾತ್ಮಾ=ಧರ್ಮಾತ್ಮನೂ, ಸತ್ಯಸಂಧಃ=ಸತ್ಯಸಂಧನೂ, ಉದಾರ ಧೀಃ= ಉದಾರ ಬುದ್ಧಿಯುಳ್ಳವನೂ, ಲಕ್ಷ್ಮೀವಾನ್=ಶ್ರೀಮಂತನೂ ಆದ, (ರಾಮಃ= ರಾಮಚಂದ್ರನು), ವಿಭೀಷಣಸ್ಯ=ವಿಭೀಷಣನ, ಅಭಿಷೇಚನಂ=ಪಟ್ಟಾಭಿಷೇಕವನ್ನು ಅನುಜೇನ=ಸೋದರನಿಂದ, ಕಾರಯಾಮಾಸ=ಮಾಡಿಸಿದನು.

ಧರ್ಮಾತ್ಮನೂ, ಸತ್ಯಸಂಧನೂ, ಉದಾರಬುದ್ಧಿಯುಳ್ಳವನೂ, ಶ್ರೀಮಂತನೂ ಆದ ರಾಮಚಂದ್ರನು ವಿಭೀಷಣನ ಪಟ್ಟಾಭಿಷೇಕವನ್ನು ತಮ್ಮನಾದ ಲಕ್ಷ್ಮಣನಿಂದ ಮಾಡಿಸಿದನು.

**ತತಃ ಪುಷ್ಪಕಮಾರುಹ್ಯ ಸಹಮಿತ್ರೈರ್ಜಗತ್ಪತಿಃ ।**
**ಭಾರ್ಯಾನುಜಾಭ್ಯಾಂ ಸಹಿತಃ ಕಿಷ್ಕಿಂಧಾಂಪ್ರಾಪ ರಾಘವಃ ॥ ೫೨ ॥**

ತತಃ=ನಂತರ, ಭಾರ್ಯಾನುಜಾಭ್ಯಾಂ=ಹೆಂಡತಿ, ಸೋದರರ, ಸಹಿತಃ= ಸಮೇತ, ಜಗತ್ಪತಿಃ=ಪ್ರಪಂಚಕ್ಕೇ ಅಧಿಪತಿಯೆನಿಸಿದ, ರಾಘವಃ=ರಾಮಚಂದ್ರನು

ಮಿತ್ರೈಃ ಸಹ = ಸ್ನೇಹಿತರ ಸಮೇತ, ಪುಷ್ಪಕಂ = ಪುಷ್ಪಕ ವಿಮಾನವನ್ನು, ಆರುಹ್ಯ= ಹತ್ತಿ, ಕಿಷ್ಕಿಂಧಾಂ = ಕಿಷ್ಕಿಂಧಾಪಟ್ಟಣವನ್ನು, ಪ್ರಾಪ = ಸೇರಿದನು.

ನಂತರ ಪತ್ನೀ ಸೋದರ ಸಮೇತನಾಗಿ ಪ್ರಪಂಚಕ್ಕೆ ಸ್ವಾಮಿಯೆನಿಸಿದ ರಾಮ ಚಂದ್ರನು ಮಿತ್ರರನ್ನು ಒಡಗೊಂಡು ಪುಷ್ಪಕವೆಂಬ ವಿಮಾನವನ್ನು ಹತ್ತಿ ಕಿಷ್ಕಿಂಧೆ ಯನ್ನು ಸೇರಿದನು

**ಕಿಷ್ಕಿಂಧಾ ನಿಲಯಾಃ ಸರ್ವಾಃ ಕಪೀನಾಂಯೋಷಿತಃ ಪ್ರಿಯಾಃ ।**
**ಸೀತಾ ಕುತೂಹಲಾತ್ ಪುಷ್ಪಂ ವಿಮಾನಂ ತಾಃ ಸಮಾರುಹನ್ ॥ ೫೩ ॥**

ಕಿಷ್ಕಿಂಧಾ ನಿಲಯಾಃ = ಕಿಷ್ಕಿಂಧೆಯ ನಿವಾಸಿಗಳಾದ, ಸರ್ವಾಃ = ಎಲ್ಲಾ, ಕಪೀನಾಂ = ವಾನರರ, ಪ್ರಿಯಾಃ = ಪ್ರೀತಿಪಾತ್ರರಾದ, ತಾಃ=ಆ, ಯೋಷಿತಃ = ಪತ್ನಿ ಯರೂ, ಸೀತಾ ಕುತೂಹಲಾತ್ = ಸೀತೆಯನ್ನು ಕಾಣಲು ಕುತೂಹಲದಿಂದ, ಪುಷ್ಪಕ ವಿಮಾನಂ = ಪುಷ್ಪಕ ವಿಮಾನವನ್ನು, ಸಮಾರುಹನ್ = ಹತ್ತಿದರು.

ಕಿಷ್ಕಿಂಧಾನಗರದ ನಿವಾಸಿಗಳಾದ ವಾನರರ ಪ್ರಿಯಪತ್ನಿಯರೆಲ್ಲರೂ ಸೀತೆಯನ್ನು ಕಾಣಬೇಕೆಂಬ ಕುತೂಹಲದಿಂದ ವಿಮಾನವನ್ನು ಹತ್ತಿದರು.

**ಅಥ ದಾಶರಥಿಃ ಶ್ರೀಮಾನ್ ಭರತಂ ದ್ರಷ್ಟುಮಿಚ್ಛಯಾ ।**
**ಭರದ್ವಾಜಾಶ್ರಮಂ ಪ್ರಾಪ್ತ ಸ್ತತ್ರ ತೇನ ನಿವಾರಿತಃ ॥ ೫೪ ॥**

ಅಥ = ನಂತರ, ಶ್ರೀಮಾನ್ = ಶ್ರೀಮಂತನಾದ, ದಾಶರಥಿಃ = ದಶರಥ ಕುಮಾರ ಶ್ರೀರಾಮನು, ಭರತಂ = ಭರತನನ್ನು, ದ್ರಷ್ಟುಂ = ನೋಡಲು, ಇಚ್ಛಯಾ = ಆಶೆ ಯಿಂದ, ಭರದ್ವಾಜಾಶ್ರಮಂ = ಭರದ್ವಾಜರ ಆಶ್ರಮವನ್ನು, ಪ್ರಾಪ್ತಃ = ಸೇರಿದನು. ತತ್ರ = ಅಲ್ಲಿ, ತೇನ = ಆ ಭರದ್ವಾಜರಿಂದ, ನಿವಾರಿತಃ = ಆತಿಥ್ಯಕ್ಕಾಗಿ ನಿಲ್ಲಿಸಲ್ಪಟ್ಟನು.

ನಂತರ ಶ್ರೀಮಂತನೂ ದಶರಥ ಕುಮಾರನೂ ಆದ ರಾಮಚಂದ್ರನು ಭರತ ನನ್ನು ಕಾಣಬೇಕೆಂಬ ಆಸೆಯಿಂದ ಭರದ್ವಾಜಾಶ್ರಮವನ್ನು ಸೇರಿ ಅವರಿಂದ ಆತಿಥ್ಯ ಕ್ಕಾಗಿ ನಿಲ್ಲಿಸಲ್ಪಟ್ಟನು.

**ಭರತಸ್ಯಾಂತಿಕಂ ರಾಮಃ ಪ್ರೇಷಯಾಮಾಸ ಮಾರುತಿಂ ।**
**ರಾಮಸ್ಯಾ ದರ್ಶನಾತ್ ವಹ್ನಿಪ್ರವೇಶಂ ಕಾಂಕ್ಷಿತೋ ಭೃಶಂ ॥ ೫೫ ॥**

ರಾಮಸ್ಯ = ರಾಮನ, ಅದರ್ಶನಾತ್ = ದರ್ಶನವಿಲ್ಲದ್ದರಿಂದ, ವಹ್ನಿಪ್ರವೇಶಂ= ಅಗ್ನಿಪ್ರವೇಶವನ್ನು, ಕಾಂಕ್ಷಿತಃ = ಅಪೇಕ್ಷಿಸಿದ್ದ (ಮಾಡಲು ತೊಡಗಿದ್ದ), ಭರತಸ್ಯ=

ಭರತನ, ಅಂತಿಕಂ = ಸಮೀಪಕ್ಕೆ, ರಾಮಃ = ರಾಮನು, ಭೃಶಂ = ಶೀಘ್ರವಾಗಿ, ಮಾರುತಂ = ಹನುಮಂತನನ್ನು, ಪ್ರೇಷಯಾಮಾಸ = ಕಳುಹಿಸಿದನು.

ರಾಮದರ್ಶನವಿಲ್ಲವಾದುದರಿಂದ ಅಗ್ನಿಪ್ರವೇಶ ಮಾಡಲು ತೊಡಗಿದ್ದ ಭರತನ ಬಳಿಗೆ ರಾಮನು ತ್ವರೆಯಾಗಿ ಹನುಮಂತನನ್ನು ಕಳುಹಿಸಿದನು.

**ತತ್ರ ತೇನ ಮುನೀಂದ್ರೇಣ ಸಾನುಜಃ ಸ ಸುಹೃದ್ಗಣಃ ।**
**ಸಂತೋಷ ವಿವಶೇ ನಾಥ ರಾಮೋಽಪಿ ವಿಧಿಪೂಜಿತಃ ॥ ೫೭ ॥**

ಅಥ = ಅನಂತರ, ತತ್ರ = ಆ ಭರದ್ವಾಜಾಶ್ರಮದಲ್ಲಿ, ಸಂತೋಷ ವಿವಶೇನ = ಸಂತೋಷಪರವಶರಾದ, ತೇನ = ಆ, ಮುನೀಂದ್ರೇಣ = ಮುನಿಶ್ರೇಷ್ಠರಾದ ಭಾರದ್ವಾಜರಿಂದ, ಸಾನುಜಃ = ಸೋದರರಿಂದ ಕೂಡಿದವನೂ, ಸ ಸುಹೃದ್ಗಣಃ = ಮಿತ್ರರಿಂದ ಕೂಡಿದವನೂ ಆದ, ರಾಮಃ ಅಪಿ = ರಾಮನಾದರೋ, ವಿಧಿ ಪೂಜಿತಃ = ವಿಧಿವತ್ತಾಗಿ ಪೂಜಿಸಲ್ಪಟ್ಟನು.

ಆಗ ಆ ಭರದ್ವಾಜಾಶ್ರಮದಲ್ಲಿ ಸಂತೋಷಪರವಶರಾದ ಭರದ್ವಾಜ ಮಹರ್ಷಿಗಳಿಂದ ಸೋದರರಿಂದಲೂ, ಮಿತ್ರರಿಂದಲೂ ಕೂಡಿದವನಾದ ರಾಮಚಂದ್ರನು ವಿಧಿವತ್ತಾಗಿ ಪೂಜಿಸಲ್ಪಟ್ಟನು.

**ರಾಮೋಽಥ ಸಹಸಂಗಮ್ಯ ಭರತೇನಾರಿಘಾತಿನಾ ।**
**ಅಯೋಧ್ಯಾಂ ಪ್ರಾವಿಶತ್ ತೂರ್ಣಂ ಮಾತೃಭಿಶ್ಚಾಭಿನಂದಿತಃ ॥ ೫೭ ॥**

ಅಥ = ಅನಂತರ, ರಾಮಃ = ರಾಮನು, ಅರಿಘಾತಿನಾ = ಶತ್ರುಗಳನ್ನು ನಾಶಪಡಿಸುವಂತಹ, ಭರತೇನ ಸಹ = ಭರತನ ಜೊತೆ, ಸಂಗಮ್ಯ = ಸೇರಿಕೊಂಡು, ತೂರ್ಣಂ = ಬೇಗನೆ, ಅಯೋಧ್ಯಾಂ = ಅಯೋಧ್ಯಾನಗರಿಯನ್ನು, ಪ್ರಾವಿಶತ್ = ಪ್ರವೇಶಮಾಡಿದನು. ಚ = ಮತ್ತು, ಮಾತೃಭಿಃ = ತಾಯಿಯರಿಂದಲೂ, ಅಭಿನಂದಿತಃ = ಅಭಿನಂದಿಸಲ್ಪಟ್ಟನು.

ಅನಂತರ ರಾಮನು ಶತ್ರುಗಳನ್ನು ನಾಶಪಡಿಸಬಲ್ಲ ಸಾಮರ್ಥ್ಯವಂತನಾದ ಭರತನ ಜೊತೆಗೂಡಿ ನಂದಿಗ್ರಾಮದಿಂದ ಬೇಗನೆ ಅಯೋಧ್ಯೆಗೆ ಬಂದು ತಾಯಿಯರಿಂದ ಅಭಿನಂದಿಸಲ್ಪಟ್ಟನು.

**ಅಥಾಯೋಧ್ಯ ನಿವಾಸಾಸ್ತೇ ಜನಾಃ ಸರ್ವೇಽಪಿತೋಷಿತಾಃ ।**
**ಅಭಿಗಮ್ಯಾಬ್ರುವನ್ ರಾಮಂ "ಧನ್ಯಾವಯ"ಮಿತಿದ್ರುತಮ್ ॥ ೫೮ ॥**

ಅಥ = ನಂತರ, ತೋಷಿತಾಂ = ಸಂತೋಷಗೊಂಡ, ಅಯೋಧ್ಯಾ ನಿವಾಸಾಃ = ಅಯೋಧ್ಯೆಯಲ್ಲಿ ವಾಸಿಸುವ, ತೇ = ಆ, ಜನಾಃ ಸರ್ವೇಪಿ = ಜನರುಗಳೆಲ್ಲರೂ ಕೂಡ, ರಾಮಂ = ರಾಮನನ್ನು, ದ್ರುತಂ = ಶೀಘ್ರದಲ್ಲಿ, ಅಭಿಗಮ್ಯ = ಎದುರುಗೊಂಡು ಹೋಗಿ, ವಯಂ = ನಾವು, ಧನ್ಯಾಃ = ಧನ್ಯರು, ಇತಿ = ಎಂಬುದಾಗಿ, ಅಬ್ರುವನ್ = ಹೇಳಿದರು.

ನಂತರ ಸಂತೋಷಗೊಂಡ ಅಯೋಧ್ಯೆಯ ನಿವಾಸಿಗಳೆಲ್ಲ ರಾಮನನ್ನು ತ್ವರೆಯಾಗಿ ಎದುರುಗೊಂಡು "ನಾವು ಧನ್ಯರು" ಎಂದು ಕೀರ್ತಿಸಿದರು.

**ಚಾತಕಾಶ್ಚ ಘನಾನ್ ದೃಷ್ಟ್ವಾ ಮಯೂರಾಶ್ಚ ಯಥಂ ಶಿಶೂನ್ ।**
**ಆಸಾಧ್ಯಮಾತರಸ್ತೋಷಂ ತಥಾ ಪ್ರಾಪುರ್ಜನಾ ಭುವಿ ॥ ೫೯ ॥**

ಚಾತಕಾಃ = ಚಾತಕಪಕ್ಷಿಗಳು, ಮಯೂರಾಃ ಚ = ನವಿಲುಗಳೂ ಕೂಡ, ಯಥಾ = ಹೇಗೆ, ಘನಾನ್ = ಮೋಡಗಳನ್ನು, ದೃಷ್ಟ್ವಾ = ಕಂಡು, ಚ = ಮತ್ತು, ಮಾತರಃ = ತಾಯಂದಿರು, ಶಿಶೂನ್ = ಮಕ್ಕಳನ್ನು, ಆಸಾಧ್ಯ = ನೋಡಿ, ತೋಷಂ = ಸಂತೋಷವನ್ನು, ಪ್ರಾಪ್ನುಯುಃ = ಹೊಂದುತ್ತಾರೆಯೋ, ತಥಾ = ಹಾಗೆ, ಜನಾಃ = ಜನರು, ಭುವಿ = ಪ್ರಪಂಚದಲ್ಲಿ, ತೋಷಂ ಪ್ರಾಪುಃ = ಆನಂದ ಹೊಂದಿದರು.

ಚಾತಕಪಕ್ಷಿಗಳೂ, ನವಿಲುಗಳೂ ಮೋಡವನ್ನು ಕಂಡು ಆನಂದಿಸುವಂತೆ ಮತ್ತು ತಾಯಂದಿರು ತಮ್ಮ ಮಕ್ಕಳನ್ನು ಕಂಡು ಸಂತೋಷಿಸುವಂತೆ ಜನರು ಪ್ರಪಂಚದಲ್ಲಿ ರಾಮನನ್ನು ಕಂಡು ಆನಂದಿಸಿದರು.

**ಅಥಾಽಭಿಷೇಕಂ ರಾಮಸ್ಯ ವಸಿಷ್ಠಾದ್ಯಾ ಮುದಾನ್ವಿತಾಃ ।**
**ಸಹಿತಾ ಮಂತ್ರಿಭಿಶ್ಚಕ್ರುಃ ವಸವೋ ವಾಸವಂ ಯಥಾ ॥ ೬೦ ॥**

ಅಥ = ನಂತರ, ಮುದಾನ್ವಿತಂ = ಸಂತೋಷದಿಂದ ಕೂಡಿದ, ಮಂತ್ರಿಭಿಃ = ಮಂತ್ರಿಗಳಿಂದ, ಸಹಿತಾ = ಕೂಡಿದ, ವಸಿಷ್ಠಾದ್ಯಾಃ = ವಸಿಷ್ಠರೇ ಮುಂತಾದವರು. ವಸವಃ = ವಸುಗಳು, ವಾಸವಂ = ಇಂದ್ರನಿಗೆ, ಯಥಾ = ಹೇಗೆ (ಅಭಿಷೇಕ ಮಾಡಿದರೋ), (ತಥಾ = ಹಾಗೆ), ರಾಮಸ್ಯ = ರಾಮಚಂದ್ರನ, ಅಭಿಷೇಕಂ = ಪಟ್ಟಾಭಿಷೇಕವನ್ನು, ಚಕ್ರುಃ = ಮಾಡಿದರು.

ನಂತರ ಸಂತೋಷಭರಿತರಾದ ಮಂತ್ರಿಗಳ ಸಮೇತ ವಸಿಷ್ಠಾದಿ ಮುನಿಗಳು ವಸುಗಳು ಇಂದ್ರನಿಗೆ ಅಭಿಷೇಕ ಮಾಡಿದಂತೆ ರಾಮಚಂದ್ರನಿಗೆ ಪಟ್ಟಾಭಿಷೇಕ ಮಾಡಿದರು.

**ಅಭಿಷೇಕೋತ್ಸವೇ ಸರ್ವೇ ಸುಗ್ರೀವಾದ್ಯಾಃ ಕಪೀಶ್ವರಾಃ ।**
**ಯಥಾರ್ಹಂ ಪೂಜಿತಾಶ್ಚಾಸನ್ ಸ್ರಗ್ಗಂಧಾಂಬರ ಭೂಷಣೈಃ ॥ ೬೧**

ಅಭಿಷೇಕೋತ್ಸವೇ = ಪಟ್ಟಾಭಿಷೇಕದ ಉತ್ಸವದಲ್ಲಿ, ಸುಗ್ರೀವಾದ್ಯಾಃ = ಸುಗ್ರೀವನೇ ಮೊದಲಾದ, ಸರ್ವೇ = ಎಲ್ಲಾ, ಕಪೀಶ್ವರಾಃ = ವಾನರ ಪ್ರಮುಖರೂ ಯಥಾರ್ಹಂ = ಯೋಗ್ಯತಾನುಸಾರವಾಗಿ, ಸ್ರಗ್ಗಂಧಾಂಬರಭೂಷಣೈಃ = ಪುಷ್ಪ ಗಂ ವಸ್ತ್ರ ಆಭರಣಭೂಷಣಗಳಿಂದ, ಪೂಜಿತಾ ಚ = ಪೂಜಿಸಲ್ಪಟ್ಟವರಾಗಿ, ಆಸನ್ = ಆದರು

ಪಟ್ಟಾಭಿಷೇಕ ಸಮಯದಲ್ಲಿ ಸುಗ್ರೀವಾದಿ ವಾನರ ಪ್ರಮುಖರೆಲ್ಲರೂ ಅವರವ ಅಂತಸ್ತಿಗನುಗುಣವಾಗಿ ಪುಷ್ಪ, ಗಂಧ, ವಸ್ತ್ರ, ಆಭರಣಾದಿಗಳಿಂದ ಪೂಜಿಸಲ್ಪಟ್ಟರು

**ವಿಶಿಷ್ಯ ಮುಕ್ತಾಹಾರೇಣ ಸೀತಯಾ ಹನೂಮಾನ್ ಮುದಂ ।**
**ಪೂಜಿತಶ್ಚ ತಥಾ ಲೇಭೇ ಯಥಾ ಸೀತಾವಲೋಕನೇ ॥ ೬೨ ।**

ಸೀತಯಾ = ಸೀತೆಯಿಂದ, ವಿಶಿಷ್ಯ = ಬಹುಮಾನವಾಗಿ ನೀಡಲ್ಪಟ್ಟ, ಮುಕ್ತಾ ಹಾರೇಣ = ಮುತ್ತಿನ ಮಾಲೆಯಿಂದ, ಪೂಜಿತಃ = ಸನ್ಮಾನಿಸಲ್ಪಟ್ಟ, ಹನುಮಾನ್ = ಹನುಮಂತನು, ಸೀತಾವಲೋಕನೇ = ಸೀತೆಯನ್ನು ಮೊದಲು ಕಂಡಾಗ, ಯಥಾ = ಹೇಗೋ, ತಥಾ = ಹಾಗೆ, ಮುದಂ = ಸಂತೋಷವನ್ನು, ಲೇಭೇ = ಅನುಭವಿಸಿದನು

ಸೀತೆಯಿಂದ ಬಹುಮಾನವಾಗಿ ಕೊಡಲ್ಪಟ್ಟ ಮುಕ್ತಾಹಾರದಿಂದ ಸನ್ಮಾ ಗೊಂಡ ಹನುಮಂತನು ತಾನು ಸೀತೆಯನ್ನು ಮೊದಲು ಕಂಡಾಗ ಅನುಭವಿಸಿ ಆನಂದದಷ್ಟು ಸಂತೋಷವನ್ನು ಹೊಂದಿದನು.

**ಸರ್ವಾಸಾಂ ವಾನರೀಣಾಂ ಚ ಕೌಸಲ್ಯಾ ಪುತ್ರವತ್ಸಲಾ ।**
**ಭೂಷಣೈರ್ಭೂಷಯಾಮಾಸ ವಸ್ತ್ರ ಚಂದನ ಕುಂಕುಮೈಃ ॥ ೬೩ ।**

ಪುತ್ರವತ್ಸಲಾ = ಪುತ್ರವಾತ್ಸಲ್ಯಯುತೆಯಾದ, ಕೌಸಲ್ಯಾ = ಕೌಸಲ್ಯೆಯು ಸರ್ವಾಸಾಂ = ಎಲ್ಲಾ, ವಾನರೀಣಾಂ = ವಾನರ ಸ್ತ್ರೀಯರಿಗೆ, ವಸ್ತ್ರ ಚಂದನ ಕುಂಕುಮೈಃ = ವಸ್ತ್ರ, ಗಂಧ, ಕುಂಕುಮಾದಿಗಳಿಂದ, ಭೂಷಣೈಃ ಚ = ಒಡ ಗಳಿಂದಲೂ ಸಹ, ಭೂಷಯಾಮಾಸ = ಶೋಭಿಸುವಂತೆ ಮಾಡಿದಳು.

ಪುತ್ರವತ್ಸಲೆ ಕೌಸಲ್ಯೆಯು ಎಲ್ಲ ವಾನರಸ್ತ್ರೀಯರನ್ನೂ ಸಹ ವಸ್ತ್ರ, ಚಂದನ ಕುಂಕುಮ ಮತ್ತು ಆಭರಣಗಳಿಂದ ಶೋಭಿಸುವಂತೆ ಮಾಡಿದಳು.

**ರಾಮಾಜ್ಞಯಾಽಥ ಸರ್ವೇಽಪಿ ಸುಗ್ರೀವಾದಿ ಪ್ಲವಂಗಮಾಃ ।**
**ಕಿಷ್ಕಿಂಧಾಂ ಲೇಭಿರೇ ಕೃಚ್ಛ್ರಾತ್ ಶ್ರೀರಾಮವಿರಹಾತುರಾಃ ॥ ೬೪ ॥**

ಅಥ = ನಂತರ, ರಾಮಾಜ್ಞಯಾ = ರಾಮನ ಆಜ್ಞೆಯಿಂದ, ಸರ್ವೇ ಅಪಿ = ಎಲ್ಲಾ, ಸುಗ್ರೀವಾದಿ ಪ್ಲವಂಗಮಾಃ = ಸುಗ್ರೀವನೇ ಮುಂತಾದ ಕಪಿಗಳೆಲ್ಲರೂ ಸಹ, ಶ್ರೀರಾಮ ವಿರಹಾತುರಾಃ = ಶ್ರೀರಾಮನ ವಿರಹದಿಂದ ಏರ್ಪಟ್ಟ ದುಃಖಭರಿತರಾಗಿ, ಕೃಚ್ಛ್ರಾತ್ = ಕಷ್ಟದಿಂದ, ಕಿಷ್ಕಿಂಧಾಂ = ಕಿಷ್ಕಿಂಧೆಯನ್ನು, ಲೇಭಿರೇ = ಸೇರಿ ಕೊಂಡರು.

ನಂತರ ರಾಮಾಜ್ಞೆಯ ಪ್ರಕಾರ ಸುಗ್ರೀವನೇ ಮುಂತಾದ ವಾನರ ಶ್ರೇಷ್ಠ ರೆಲ್ಲರೂ ಸಹ ರಾಮನ ವಿರಹದಿಂದ ಏರ್ಪಟ್ಟ ದುಃಖದಿಂದ ಬಹಳ ಕಷ್ಟದಿಂದ ಕಿಷ್ಕಿಂಧೆ ಯನ್ನು ಸೇರಿಕೊಂಡರು.

**ಅತಿಭಕ್ತೋ ದೀರ್ಘಜೀವೀ ಲಂಕಾ ಸಮರ ಸಾಧಕಃ ।**
**ಅನುಜ್ಞಾತಃ ಸ ರಾಮೇಣ ಲಂಕಾಂ ಪ್ರಾಯಾತ್ ವಿಭೀಷಣಃ ॥ ೬೫ ॥**

ಅತಿ ಭಕ್ತಃ = ಅತ್ಯಂತ ಭಕ್ತಿಯುಳ್ಳವನೂ, ದೀರ್ಘಜೀವೀ = ಚಿರಂಜೀವಿಯೂ, ಲಂಕಾ ಸಮರ ಸಾಧಕಃ = ಲಂಕೆಯ ಯುದ್ಧವನ್ನು ಸಾಧಿಸಿದವನೂ ಆದ, ಸಃ ವಿಭೀಷಣಃ = ಆ ಯಾವ ವಿಭೀಷಣನು, ರಾಮೇಣ = ರಾಮನಿಂದ, ಅನುಜ್ಞಾತಃ = ಅಪ್ಪಣೆ ಪಡೆದವನಾಗಿ, ಲಂಕಾಂ = ಲಂಕೆಯನ್ನು, ಪ್ರಾಯಾತ್ = ಕುರಿತು ಪ್ರಯಾಣ ಮಾಡಿದನು.

ಪರಮ ಭಕ್ತನೂ, ಚಿರಂಜೀವಿಯೂ. ಲಂಕೆಯ ಯುದ್ಧವನ್ನು ಸಾಧಿಸಿದವನೂ ಆದ ಯಾವ ಆ ವಿಭೀಷಣನು ರಾಮನಿಂದ ಆಜ್ಞಾಪ್ತನಾಗಿ ಲಂಕೆಯನ್ನು ಕುರಿತು ಪ್ರಯಾಣ ಬೆಳಸಿದನು.

**ಪಿತುಃ ಸಿಂಹಾಸನಂ ಪ್ರಾಪ್ಯ ಭ್ರಾತೃಭಿಃ ಸಹಿತೋಽನಘಃ ।**
**ವಿರರಾಜ ತಥಾ ರಾಮೋ ಯಥಾಜಿಷ್ಣುಸ್ತ್ರಿವಿಷ್ಟಪೇ ॥ ೬೬ ॥**

ಅನಘಃ = ಪಾಪವಿದೂರನಾದ, ರಾಮಃ = ರಾಮನು, ಪಿತುಃ = ತಂದೆಯ, ಸಿಂಹಾಸನಂ = ಸಿಂಹಾಸನವನ್ನು, ಪ್ರಾಪ್ಯ = ಹೊಂದಿ, ಭ್ರಾತೃಭಿಃ ಸಹಿತಃ = ಸೋದರ ರೊಂದಿಗೆ, ಯಥಾ = ಹೇಗೆ, ತ್ರಿವಿಷ್ಟಪೇ = ಸ್ವರ್ಗದಲ್ಲಿ, ಜಿಷ್ಣುಃ = ಇಂದ್ರನು ಪ್ರಕಾಶಿಸುವನೋ), ತಥಾ = ಹಾಗೆ, ವಿರರಾಜ = ಶೋಭಿಸಿದನು.

ಪಾಪವಿದೂರನಾದ ರಾಮಚಂದ್ರನು ತಂದೆಯ ಸಿಂಹಾಸನವನ್ನು ಪಡೆದವನಾ
ಸೋದರರೊಂದಿಗೆ ದೇವಲೋಕದಲ್ಲಿ ಇಂದ್ರನು ಹೇಗೋ ಹಾಗೆ ಪ್ರಕಾಶಿಸಿದನು.

**ಲಕ್ಷ್ಮಣಾನುಮತೇ ರಾಮೋ ಯೌವ್ವರಾಜ್ಯಂ ತು ದತ್ತವಾನ್ ।**
**ಭರತಾಯಾ ಪ್ರಮೇಯಾಯ ಪ್ರಾಣಪ್ರಿಯತರಾಯ ಸಃ ॥ ೬೭ ।**

ಸಃ ರಾಮಃ = ಆ ರಾಮನು, ಪ್ರಾಣಪ್ರಿಯತರಾಯ = ಪ್ರಾಣಕ್ಕಿಂತಲೂ ಹೆಚ್ಚಾದ, ಅಪ್ರಮೇಯಾಯ = ಅಳತೆಗೆ ಸಿಕ್ಕದವನೂ ಆದ, ಭರತಾಯ = ಭರತನಿಗೆ ಲಕ್ಷ್ಮಣಾಯ = ಲಕ್ಷ್ಮಣನಿಂದ, ಅನುಮತೇ = ಅನುಮತಿಸಲ್ಪಟ್ಟ, ಯೌವ್ವರಾಜ್ಯಂ = ಯುವರಾಜ ಪದವಿಯನ್ನು, ದತ್ತವಾನ್ ತು = ಕೊಟ್ಟನು.

ಆ ರಾಮಚಂದ್ರನಾದರೋ ಪ್ರಾಣಪ್ರಿಯನೂ ಅಪ್ರಮೇಯನೂ ಆದ ಭರತನಿ
ಲಕ್ಷ್ಮಣನ ಇಷ್ಟದಂತೆ ಯುವರಾಜ ಪದವಿಯನ್ನು ನೀಡಿದನು.

**ಚತ್ವಾರಸ್ತೇ ಮಹಾತ್ಮಾನಃ ಸಭಾರ್ಯಾ ರಘುಸತ್ತಮಾಃ ।**
**ಖೇ ಸತಾರೋ ಯಥಾ ಚಂದ್ರಃ ತಥಾ ರೇಜುಃ ಸ್ವಪತ್ತನೇ ॥ ೬೮**

ಮಹಾತ್ಮಾನಃ = ಮಹಾತ್ಮರಾದ, ತೇ = ಆ, ಚತ್ವಾರಃ = ನಾಲ್ವರು, ರಘುಸತ್ತಮಾಃ = ರಘುವಂಶದಲ್ಲಿ ಜನಿಸಿದವರೂ, ಸಭಾರ್ಯಾಃ = ಪತ್ನಿಯರ ಜೊಯಲ್ಲಿ, ಖೇ = ಆಕಾಶದಲ್ಲಿ, ಯಥಾ = ಹೇಗೆ, ಸತಾರಃ = ನಕ್ಷತ್ರಗಳನ್ನೊಳಗೊಂಡು ಚಂದ್ರಃ = ಚಂದ್ರನೋ, ತಥಾ = ಹಾಗೆ, ಸ್ವಪತ್ತನೇ = ತಮ್ಮ ಪಟ್ಟಣದಲ್ಲಿ ರೇಜುಃ = ಪ್ರಕಾಶಿಸುತ್ತಿದ್ದರು.

ಮಹಾತ್ಮರಾದ ಆ ನಾಲ್ವರು ರಘುಶ್ರೇಷ್ಠರೂ ತಮ್ಮ ಪತ್ನಿಯರ ಒಡಗೂ
ಆಕಾಶದಲ್ಲಿ ಹೇಗೆ ತಾರೆಗಳ ಜೊತೆಯಲ್ಲಿ ಚಂದ್ರನು ಪ್ರಕಾಶಿಸುತ್ತಿರುವನೋ ಆ ರೀ
ತಮ್ಮ ಪಟ್ಟಣದಲ್ಲಿ ರಾರಾಜಿಸುತ್ತಿದ್ದರು.

**ಇತಿ ಯುದ್ಧಕಾಂಡಃ**

ಯುದ್ಧಕಾಂಡವು ಮುಗಿಯಿತು

# ಅಥ ಉತ್ತರಕಾಂಡಃ

## ಉತ್ತರಕಾಂಡ

**" ರಾಜಾ ಪರ್ಯಗ್ರಹೀದೇವ ಭಾರ್ಯಾಂ ರಾವಣ ದೂಷಿತಾಂ ।**
**ಇತ್ಯಜ್ಞ ಜನವಾದೇನ ರಾಮಸ್ತತ್ಯಾಜ ಮೈಥಿಲೀಂ ॥ ೧ ॥**

ರಾಜಾ = ಅರಸನು. ರಾವಣದೂಷಿತಾಂ = ರಾವಣನಿಂದ ಕದ್ದೊಯ್ಯಲ್ಪಟ್ಟ, ಭಾರ್ಯಾಂ = ಹೆಂಡತಿಯನ್ನು, ಪರ್ಯಗ್ರಹೀತ್ ಏವ = ಸ್ವೀಕರಿಸಿದನು. ಇತಿ = ಹೀಗೆಂಬ, ಅಜ್ಞಜನವಾದೇನ = ತಿಳಿಯದ ಜನರ ಮಾತಿನಿಂದ, ರಾಮಃ = ರಾಮನು, ಮೈಥಿಲೀಂ = ಸೀತೆಯನ್ನು. ತತ್ಯಾಜ = ತ್ಯಜಿಸಿಬಿಟ್ಟನು.

ಅರಸನು ರಾವಣನಿಂದ ಕದ್ದೊಯ್ಯಲ್ಪಟ್ಟ ಸೀತೆಯನ್ನು ಪರಿಗ್ರಹಿಸಿದನು ಎಂಬ ಅಜ್ಞರಾದ ಜನರ ಮಾತಿನಿಂದ ರಾಮನು ಸೀತೆಯನ್ನು ತ್ಯಜಿಸಿಬಿಟ್ಟನು.

**ತದ್ವಿದಿತ್ವಾಽಥ ವಾಲ್ಮೀಕಿಃ ಆನೀಯೈನಾಂ ನಿಜಾಶ್ರಮಂ ।**
**ಅಂತರ್ವತ್ನೀಂ ಸಮಾಶ್ವಾಸ್ಯ ತತ್ರೈವಾ ವಾಸಯತ್ ಸುಖಮ್ ॥ ೨ ॥**

ಅಥ = ಅನಂತರದಲ್ಲಿ, ವಾಲ್ಮೀಕಿಃ = ವಾಲ್ಮೀಕಿ ಋಷಿಗಳು, ತತ್ = ಅದನ್ನು, ವಿದಿತ್ವಾ = ತಿಳಿದುಕೊಂಡು. ಅಂತರ್ವತ್ನೀಂ = ಗರ್ಭವತಿಯಾಗಿದ್ದ, ಏನಾಂ = ಆಕೆಯನ್ನು, ನಿಜಾಶ್ರಮಂ = ತನ್ನ ಆಶ್ರಮಕ್ಕೆ, ಆನೀಯಂ = ಕರೆತಂದು, ಸಮಾಶ್ವಾಸ್ಯ = ಭರವಸೆಯನ್ನು ನೀಡಿ, ತತ್ರ ಏವ = ಅಲ್ಲಿಯೇ, ಸುಖಂ = ಸುಖವಾಗಿ, ಅವಾಸಯತ್ = ವಾಸಿಸುವಂತೆ ಮಾಡಿದರು.

ನಂತರ ವಾಲ್ಮೀಕಿ ಋಷಿಗಳು ಅದನ್ನರಿತು ಗರ್ಭಿಣಿಯಾಗಿದ್ದ ಸೀತೆಯನ್ನು ಕರೆತಂದು ಆಶ್ವಾಸನೆ ನೀಡಿ ತಮ್ಮ ಆಶ್ರಮದಲ್ಲಿಯೇ ಸುಖವಾಗಿ ವಾಸಿಸುವಂತೆ ಏರ್ಪಾಡು ಮಾಡಿದರು.

**ಋಷಿಭಿಃ ಪ್ರಾರ್ಥಿತಸ್ಯಾಥ ರಾಘವಸ್ಯ ನಿಯೋಗತಃ ।**
**ಶತ್ರುಘ್ನೋ ಲವಣಂ ಯುದ್ಧೇ ನಿಹತ್ಯೈತಾನಪಾಲಯತ್ ॥ ೩ ॥**

ಅಥ = ಅನಂತರ, ಋಷಿಭಿಃ = ಮುನಿಗಳಿಂದ, ಪ್ರಾರ್ಥಿತಸ್ಯ = ಪ್ರಾರ್ಥಿಸಲ್ಪಟ್ಟವನಾದ ರಾಘವಸ್ಯ = ರಾಮನ, ನಿಯೋಗತಃ = ಅಪ್ಪಣೆಯಿಂದ, ಶತ್ರುಘ್ನಃ = ಶತ್ರುಘ್ನನು, ಲವಣಂ = ಲವಣಾಸುರನೆಂಬ ರಾಕ್ಷಸನನ್ನು, ಯುದ್ಧೇ = ಯುದ್ಧದಲ್ಲಿ, ನಿಹತ್ಯ = ಕೊಂದು, ಏತಾನ್ = ಆ ಮುನಿವರರನ್ನು, ಅಪಾಲಯತ್ = ಕಾಪಾಡಿದನು.

ಅನಂತರ ಮುನಿವರರಿಂದ ಪ್ರಾರ್ಥಿಸಲ್ಪಟ್ಟು ರಘುರಾಮನ ಆಣತಿಯಂತೆ ಶತ್ರುಘ್ನನು ಲವಣಾಸುರನನ್ನು ಯುದ್ಧದಲ್ಲಿ ಕೊಂದು ಆ ಋಷಿಗಳನ್ನು ಕಾಪಾಡಿದನು.

**ರಾಮೋ ಹೇಮಮಯೀಂ ಪತ್ನೀಂ ಕೃತ್ವಾ ಯಜ್ಞಂ ವಿತನ್ವತಿ ।**
**ಆನೀಯ ಸ ಸುತಾಂ ಸೀತಾಂ ತಸ್ಮೈ ಪ್ರಾಚೇತಸೋ ದದೌ ॥ ೪ ॥**

ರಾಮೇ = ರಾಮನು, ಹೇಮಮಯೀಂ = ಸ್ವರ್ಣಮಯವಾದ, ಪತ್ನೀಂ = ಪತ್ನಿಯ ಪ್ರತಿಮೆಯನ್ನು, ಕೃತ್ವಾ = ಮಾಡಿಸಿ, ಯಜ್ಞಂ = ಯಾಗವನ್ನು, ವಿತನ್ವತಿ- ಸತಿ = ಮಾಡುತ್ತಿರಲು, ತಸ್ಮೈ = ಅವನಿಗೆ, ಸ ಸುತಾಂ = ಮಕ್ಕಳೊಂದಿಗೆ, ಸೀತಾಂ= ಸೀತೆಯನ್ನು, ಆನೀಯ = ಕರೆತಂದು, ಪ್ರಾಚೇತಸಃ = ವಾಲ್ಮೀಕಿ ಋಷಿಗಳು, ದದೌ= ಒಪ್ಪಿಸಿದರು.

ರಾಮನು ಸ್ವರ್ಣಸೀತೆಯ ವಿಗ್ರಹವನ್ನು ಮಾಡಿಸಿ ಯಾಗವನ್ನು ನಡೆಸುತ್ತಿರಲಾಗಿ ವಾಲ್ಮೀಕಿ ಋಷಿಗಳು ಪುತ್ರರೊಂದಿಗೆ ಕೂಡಿದ ಸೀತೆಯನ್ನು ಕರೆದು ತಂದು ಅವನಿಗೆ ಒಪ್ಪಿಸಿದರು.

**ಶಂಕ್ಯಮಾನಾ ಪುನಶ್ಚೈವ ರಾಮೇಣ ಜನಕಾತ್ಮಜಾ ।**
**ಭೂಮ್ಯಾ ಪ್ರಾರ್ಥಿತಯಾ ದತ್ತಂ ವಿವರಂ ಪ್ರವಿವೇಶಸಾ ॥ ೫ ॥**

ಪುನಃ ಚ ಏವ = ಮತ್ತೆಯೂ ಕೂಡ, ರಾಮೇಣ = ರಾಮನಿಂದ, ಶಂಕ್ಯ- ಮಾನಾ = ಸಂದೇಹಿಸಲ್ಪಟ್ಟವಳಾದ, ಸಾ = ಆ, ಜನಕಾತ್ಮಜಾ = ಜನಕರಾಜ ಕುಮಾರಿಯಾದ ಸೀತೆಯು, ಪ್ರಾರ್ಥಿತಯಾ = ಪ್ರಾರ್ಥಿಸಲ್ಪಟ್ಟ, ಭೂಮ್ಯಾಂ = ಭೂಮಿಯಿಂದ, ದತ್ತಂ = ನೀಡಲ್ಪಟ್ಟ, ವಿವರಂ = ದ್ವಾರವನ್ನು, ಪ್ರವಿವೇಶ = ಪ್ರವೇಶಿಸಿದಳು.

ಮತ್ತೆಯೂ ಕೂಡ ರಾಮನಿಂದ ಸಂದೇಹಿಸಲ್ಪಟ್ಟವಳಾದ ಜಾನಕಿಯು ತನ್ನಿಂದ ಪ್ರಾರ್ಥಿಸಲ್ಪಟ್ಟ ಭೂಮಿಯಿಂದ ನೀಡಲ್ಪಟ್ಟ ಬಾಯಿಯನ್ನು ಪ್ರವೇಶಿಸಿಬಿಟ್ಟಳು.

**ಅಥ ರಾಮಸ್ಯ ನಿರ್ದೇಶಾತ್ ಪೌರೈಃ ಸಹವನೌಕಸಃ ।**
**ನಿಮಜ್ಜ್ಯ ಸರಯೂ ತೀರ್ಥೇ ದೇಹಂ ತ್ಯಕ್ತ್ವಾ ದಿವಂ ಯಯೌ ॥ ೬ ॥**

ಅಥ = ನಂತರ, ರಾಮಸ್ಯ = ರಾಮಚಂದ್ರನ, ನಿರ್ದೇಶಾತ್ = ಅಪ್ಪಣೆಯಂತೆ, ವನೌಕಸಃ = ವನವಾಸಿಗಳಾದ ಋಷಿಗಳು, ಪೌರೈಸ್ಸಹ = ಪಟ್ಟಣಿಗರೊಡನೆ ಕೂಡಿ,

ಸರಯೂ ತೀರ್ಥೇ = ಸರಯೂ ನದಿಯ ನೀರಿನಲ್ಲಿ, ನಿಮಜ್ಜ್ಯ = ಮುಳುಗಿ, ದೇಹಂ = ದೇಹವನ್ನು, ತ್ಯಕ್ತ್ವಾ = ತ್ಯಜಿಸಿ, ದಿವಂ = ಸ್ವರ್ಗವನ್ನು, ಯಯೌ = ಸೇರಿದರು.

ನಂತರ ರಾಮನ ಅಪ್ಪಣೆಯಂತೆ ಋಷಿಗಳೂ ಪೌರರೂ ಕೂಡ ಸರಯೂ ನದಿಯ ನೀರಿನಲ್ಲಿ ಮುಳುಗಿ ದೇಹವನ್ನು ತ್ಯಜಿಸಿ ಸ್ವರ್ಗವನ್ನು ಸೇರಿಕೊಂಡರು.

**ತತೋ ಭರತ ಶತ್ರುಘ್ನೌ ನಿಜರೂಪಂ ಅವಾಪತುಃ ।**
**ರಾಮೋಽಪಿ ಮಾನುಷಂ ದೇಹಂ ತ್ಯಕ್ತ್ವಾ ಧಾಮಾವಿಶತ್ ಸ್ವಕಂ ॥ ೭ ॥**

ತತಃ = ನಂತರ, ಭರತ ಶತ್ರುಘ್ನೌ = ಭರತ ಶತ್ರುಘ್ನರು, ನಿಜರೂಪಂ = ತಮ್ಮ ನಿಜಸ್ವರೂಪವನ್ನು, ಅವಾಪತುಃ = ಹೊಂದಿದರು. ರಾಮಃ ಅಪಿ = ರಾಮನೂ ಸಹ, ಮಾನುಷಂ ದೇಹಂ = ಮನುಷ್ಯ ಶರೀರವನ್ನು, ತ್ಯಕ್ತ್ವಾ = ಬಿಟ್ಟವನಾಗಿ, ಸ್ವಕಂ = ತನ್ನದಾದ, ಧಾಮಂ = ಲೋಕವನ್ನು, ಆವಿಶತ್ = ಪ್ರವೇಶಿಸಿದನು.

ನಂತರದಲ್ಲಿ ಭರತ ಶತ್ರುಘ್ನರು ತಮ್ಮ ನಿಜಸ್ವರೂಪ ಶಂಖಚಕ್ರದ ರೂಪವನ್ನು ಪಡೆದರು. ರಾಮನೂ ಕೂಡ ಮಾನುಷ ಶರೀರವನ್ನು ತ್ಯಜಿಸಿ ವಿಷ್ಣುರೂಪವನ್ನು ಧರಿಸಿ ತನ್ನ ಲೋಕವಾದ ವೈಕುಂಠವನ್ನು ಪ್ರವೇಶಿಸಿದನು.

ರಾಮೋದಂತವು ಮುಗಿಯಿತು



# ರವಿ ಪ್ರಾರ್ಥನೆ

**ಶ್ರೀರಾಮೋದಂತಮಾಖ್ಯಾತಂ ಇದಂ ಮಂದಧಿಯಾಮಯಾ ।**
**ಸಮೀಕ್ಷ್ಯ ನಿಪುಣೈಃ ಸದ್ಭಿಃ ಸಂಶೋಧ್ಯ ಪರಿಗೃಹ್ಯತಾಂ ॥ ೧ ॥**

ಮಂದಧಿಯಾಂ = ಮಂದಬುದ್ಧಿಯುಳ್ಳ, ಮಯಾ = ನನ್ನಿಂದ, ಆಖ್ಯಾತಂ = ಹೇಳಲ್ಪಟ್ಟ, ಇದಂ = ಈ, ಶ್ರೀರಾಮೋದಂತಂ = ಶ್ರೀರಾಮ ಚರಿತ್ರೆಯು, ನಿಪುಣೈಃ = ನಿಪುಣರಾದ, ಸದ್ಭಿಃ = ಸಹೃದಯರಿಂದ, ಸಮೀಕ್ಷ್ಯ = ಸಮೀಕ್ಷಿಸಲ್ಪಟ್ಟು, ಸಂಶೋಧ್ಯ = ಸಂಶೋಧಿಸಲ್ಪಟ್ಟು, ಪರಿಗೃಹ್ಯತಾಂ = ಪರಿಗ್ರಹಿಸಲ್ಪಡಲಿ.

ಮಂದಬುದ್ಧಿಯುಳ್ಳ ನನ್ನಿಂದ ಹೇಳಲ್ಪಟ್ಟ ಈ ರಾಮೋದಂತವು ನಿಪುಣರಾ ಸಹೃದಯರಿಂದ ಸಮೀಕ್ಷಿಸಲ್ಪಟ್ಟು ಸಂಶೋಧಿಸಲ್ಪಟ್ಟು ಪರಿಗ್ರಹಿಸಲ್ಪಡಲಿ.

**ಯಸ್ತು ದಾಶರಥಿರ್ಭೂತ್ವಾ ರಣೇಹತ್ವಾ ಚ ರಾವಣಂ ।**
**ರರಕ್ಷ ಲೋಕಾನ್ ವೈಕುಂಠಃ ಸಮಾಂ ರಕ್ಷತು ಚಿನ್ಮಯಃ ॥ ೨**

ಯಃ ತು = ಯಾವನು, ದಾಶರಥಿರ್ಭೂತ್ವಾ = ದಶರಥನ ಮಗನಾಗಿ ಅವತರಿಸಿ ರಣೇ = ಯುದ್ಧದಲ್ಲಿ, ರಾವಣಂ = ರಾವಣನನ್ನು, ಹತ್ವಾ = ಸಂಹರಿಸಿ, ಲೋಕಾನ ಚ = ಲೋಕಗಳನ್ನೂ ಕೂಡ, ರರಕ್ಷ = ಸಂರಕ್ಷಿಸಿದನೋ, ಸಃ = ಅಂತಹ (ಆ ಚಿನ್ಮಯಃ = ಜ್ಞಾನಪೂರ್ಣನಾದ, ವೈಕುಂಠಃ = ವಿಷ್ಣುವು, ಮಾಂ = ನನ್ನನ್ನು ರಕ್ಷತು = ಕಾಪಾಡಲಿ.

ಯಾವನು ದಶರಥನ ಮಗನಾಗಿ ಯುದ್ಧದಲ್ಲಿ ರಾವಣನನ್ನು ವಧಿಸಿ ಸಮ ಲೋಕಗಳನ್ನು ಸಲಹಿದನೋ ಅಂತಹ ಜ್ಞಾನಸ್ವರೂಪಿಯಾದ ವಿಷ್ಣುವು ನನ್ನ ಕಾಪಾಡಲಿ

॥ ಇತೀಶಮ್ ॥

# ಅನುಬಂಧ

ಶ್ರೀರಾಮೋದಂತದ ಯುದ್ಧಕಾಂಡದಲ್ಲಿ ಅರವತ್ತೆಂಟು ಶ್ಲೋಕಗಳು ಇರುವುವಷ್ಟೆ! ಆದರೆ ಕೇರಳದಲ್ಲಿ ದೊರೆತ ಮತ್ತೊಂದು ಓಲೆಗರಿ ಮಾತೃಕೆಯ ಪ್ರಕಾರ ಯುದ್ಧಕಾಂಡದಲ್ಲಿ ಕೇವಲ ಇಪ್ಪತ್ತೆರಡು ಶ್ಲೋಕಗಳು ಮಾತ್ರ ಇರುತ್ತವೆ. ಈ ಪುಸ್ತಕದ ಯುದ್ಧಕಾಂಡದಲ್ಲಿನ ಮೊದಲಿನ ಒಂಭತ್ತು ಶ್ಲೋಕಗಳು ಅಲ್ಲಿಯೂ ಇದ್ದು ನಂತರದ ಐವತ್ತೊಂಭತ್ತು ಶ್ಲೋಕಗಳಿಗೆ ಬದಲಾಗಿ ಈ ಕೆಳಕಂಡ ಹದಿಮೂರು ಶ್ಲೋಕಗಳು ಕಂಡುಬರುತ್ತವೆ. ಈ ಶ್ಲೋಕಗಳೂ ಸಮಂಜಸವಾಗಿಯೂ ಸುಂದರವಾಗಿಯೂ ಕಂಡುಬರುವುದರಿಂದ ಅವುಗಳನ್ನೂ ಅವುಗಳ ಅರ್ಥ ತಾತ್ಪರ್ಯಗಳೊಡನೆ ವಾಚಕರ ಅವಗಾಹನೆಗೆಂದು ಇಲ್ಲಿ ಕೊಡಲಾಗಿದೆ.

**ಇಂದ್ರಜಿತ್ ಪುನರಪ್ಯಾಜೌ ಸಾನುಜಂ ಚ ರಘೂತ್ತಮಂ ।**
**ಅಮೋಹಯದ್ವಾನರಾಂಶ್ಚ ಬ್ರಹ್ಮಾಸ್ತ್ರೇಣಾಸ್ತ್ರಕೋವಿದಃ ॥ ೧ ॥**

ಅಸ್ತ್ರಕೋವಿದಃ = ಅಸ್ತ್ರಗಳ ಅನುಸಂಧಾನದಲ್ಲಿ ಪರಿಣಿತನಾದ, ಇಂದ್ರಜಿತ್ = ಇಂದ್ರಜಿತ್ತು, ಪುನರಪಿ = ಮತ್ತೆ, ಆಜೌ = ಯುದ್ಧದಲ್ಲಿ, ಸಾನುಜಂ = ಸೋದರನೊಂದಿಗೆ ಕೂಡಿದ, ರಘೂತ್ತಮಂ = ರಘುಶ್ರೇಷ್ಠನಾದ ರಾಮಚಂದ್ರನನ್ನು, ಚ = ಮತ್ತು, ವಾನರಾನ್ ಚ = ವಾನರರನ್ನೂ ಕೂಡ, ಬ್ರಹ್ಮಾಸ್ತ್ರೇಣ = ಬ್ರಹ್ಮಾಸ್ತ್ರ ಪ್ರಯೋಗದಿಂದ, ಅಮೋಹಯತ್ = ಮೈಮರೆಯುವಂತೆ ಮಾಡಿದನು (ಮೂರ್ಛೆಗೊಳಿಸಿದನು).

ಅಸ್ತ್ರಪ್ರಯೋಗಚತುರನಾದ ಇಂದ್ರಜಿತುವು ಮತ್ತೆ ಯುದ್ಧದಲ್ಲಿ ರಾಮಲಕ್ಷ್ಮಣರನ್ನೂ ವಾನರರನ್ನೂ ಕೂಡ ಬ್ರಹ್ಮಾಸ್ತ್ರಪ್ರಯೋಗದ ಮೂಲಕ ಮೂರ್ಛೆಗೊಳ್ಳುವಂತೆ ಮಾಡಿದನು.

**ತದೈವ ಗತ್ವಾ ಹನುಮಾನಾನೀಯೌಷಧಿ ಪರ್ವತಮ್ ।**
**ಏತಾನ್ ಸರ್ವಾನ್ ಬೋಧಯಿತ್ವಾ ಸ್ವಸ್ಥಾನೇ ಸ್ಥಾಪಯಚ್ಚತಂ ॥ ೨ ॥**

ತದೈವ ಗತ್ವಾ = ಆಗಲೇ ಹೋಗಿ, ಹನುಮಾನ್ = ಆಂಜನೇಯನು, ಓಷಧಿ ಪರ್ವತಂ = ಸಂಜೀವಿನಿ ಪರ್ವತವನ್ನು, ಆನೀಯ = ತಂದನು. ಚ = ಮತ್ತು, ಏತಾನ್ ಸರ್ವಾನ್ = ಇವರೆಲ್ಲರನ್ನೂ, ಬೋಧಯಿತ್ವಾ = ಮೂರ್ಛೆ ತಿಳಿಯುವಂತೆ ಮಾಡಿ,

ತಂ = ಆ ಪರ್ವತವನ್ನು, ಸ್ವಸ್ಥಾನೇ = ಮೊದಲಿನ ಸ್ಥಳದಲ್ಲಿ, ಸ್ಥಾಪಯತ್ = ಇರುವಂತೆ ಮಾಡಿದನು.

ಆಗಲೇ ಹನುಮಂತನು ಹೋಗಿ ಸಂಜೀವಿನೀ ಪರ್ವತವನ್ನು ತಂದು ಎಲ್ಲರನ್ನೂ ಮೂರ್ಛೆ ತಿಳಿಯುವಂತೆ ಮಾಡಿ ಪರ್ವತವನ್ನು ಸ್ವಸ್ಥಾನದಲ್ಲಿ ಇರಿಸಿದನು.

**ತತೋ ನಿಕುಂಭಿಲಾಂ ಗತ್ವಾ ಸೌಮಿತ್ರಿಃ ಸ ವಿಭೀಷಣಃ ।**
**ನಿಷಿಧ್ಯೇಂದ್ರ ಜಿತೋಹೋಮಂ ಸಂಯುಗೇ ತಂ ಜಘಾನ ಚ ॥ ೩ ॥**

ತತಃ = ನಂತರ, ಸೌಮಿತ್ರಿಃ = ಲಕ್ಷ್ಮಣನು, ಸ ವಿಭೀಷಣಃ = ವಿಭೀಷಣನ ಸಮೇತ, ನಿಕುಂಭಿಲಾಂ = ನಿಕುಂಭಿಲೆಯನ್ನು, ಗತ್ವಾ = ಸೇರಿ, ಇಂದ್ರಜಿತಃ = ಇಂದ್ರಜಿತುವಿನ, ಹೋಮಂ = ಯಾಗವನ್ನು, ನಿಷಧ್ಯ = ತ್ಯಜಿಸುವಂತೆಮಾಡಿ, ಚ = ಮತ್ತು, ಸಂಯುಗೇ = ಯುದ್ಧದಲ್ಲಿ, ತಂ = ಅವನನ್ನು, ಜಘಾನ = ಸಂಹಾರ ಮಾಡಿದನು.

ನಂತರ ಲಕ್ಷ್ಮಣನು ವಿಭೀಷಣನ ಜೊತೆಯಲ್ಲಿ ನಿಕುಂಭಿಲೆಯನ್ನು ಸೇರಿ ಇಂದ್ರಜಿತುವನ್ನು ಯಾಗವನ್ನು ತ್ಯಜಿಸುವಂತೆಮಾಡಿ ಯುದ್ಧದಲ್ಲಿ ಕೊಂದುಹಾಕಿದನು.

**ತಚ್ಛ್ರುತ್ವಾ ರಾವಣಃ ಕ್ರುದ್ಧೋ ನಿರ್ಯಾಯ ಶರವೃಷ್ಟಿಭಿಃ ।**
**ಪ್ಲವಂಗಮಾನ್ ಪೀಡಯಿತ್ವಾ ರಾಮೇಣ ಯುಯುಧೇ ಭೃಶಂ ॥ ೪ ॥**

ತತ್ ಶ್ರುತ್ವಾ = ಅದನ್ನು ಕೇಳಿ, ಕ್ರುದ್ಧಃ = ಕೋಪಕೊಂಡ, ರಾವಣಃ = ರಾವಣನು, ನಿರ್ಯಾಯ = (ಲಂಕೆಯಿಂದ) ಹೊರಹೊರಟನು. ಶರವೃಷ್ಟಿಭಿಃ = ಬಾಣಗಳನ್ನು ಸುರಿಸುವುದರಿಂದ, ಪ್ಲವಂಗಮಾನ್ = ವಾನರರನ್ನು, ಪೀಡಯಿತ್ವಾ = ಹಿಂಸೆಗೊಳಪಡಿಸಿ, ರಾಮೇಣ ಸಹ = ರಾಮನೊಂದಿಗೆ, ಭೃಶಂ = ಭಯಂಕರವಾಗಿ, ಯುಯುಧೇ = ಯುದ್ಧವನ್ನು ಮಾಡಿದನು.

ಅದನ್ನು ಕೇಳಿದ ರಾವಣನು ಕೋಪಾವಿಷ್ಟನಾಗಿ ಲಂಕೆಯಿಂದ ಹೊರಬಂದು ಶರವೃಷ್ಟಿಯಿಂದ ಕಪಿಗಳನ್ನೆಲ್ಲಾ ಬಳಲಿಸಿ ರಾಮನೊಂದಿಗೆ ಭಯಂಕರವಾದ ಯುದ್ಧವನ್ನು ಮಾಡಿದನು.

**ರಾಮೋಽಪಿ ಸುಚಿರಂ ತೇನ ಕೃತ್ವಾ ಯುದ್ಧಂ ಸುದಾರುಣಂ ।**
**ಬ್ರಹ್ಮಾಸ್ತ್ರೇಣ ಜಘಾನೈನಂ ಬ್ರಹ್ಮದತ್ತವರಂ ರಿಪುಂ ॥ ೫ ॥**

ರಾಮಃ ಅಪಿ = ರಾಮನೂ ಕೂಡ, ಸುಚಿರಂ = ಬಹಳ ಹೊತ್ತು, ತೇನ = ಅವನ

ಜೊತೆ, ಸುದಾರುಣಂ = ಘೋರವಾದ, ಯುದ್ಧಂ = ಯುದ್ಧವನ್ನು, ಕೃತ್ವಾ = ಮಾಡಿ, ಬ್ರಹ್ಮದತ್ತ ವರಂ = ಬ್ರಹ್ಮನಿಂದ ಪಡೆದ ವರದಿಂದ, ರಿಪುಂ = ಶತ್ರುವಾದ, ಏನಂ = ರಾವಣನನ್ನು, ಬ್ರಹ್ಮಾಸ್ತ್ರೇಣ = ಬ್ರಹ್ಮಾಸ್ತ್ರದಿಂದ, ಜಘಾನ = ಕೊಂದು ಹಾಕಿದನು.

ರಾಮನಾದರೋ ಬಹಳ ಕಾಲ ಅವನ ಜೊತೆ ಘೋರವಾದ ಯುದ್ಧಮಾಡಿ ಬ್ರಹ್ಮನಿಂದ ಪಡೆದ ವರದಿಂದ ಶತ್ರುವಾದ ರಾವಣನನ್ನು ಬ್ರಹ್ಮಾಸ್ತ್ರದಿಂದ ಕೊಂದು ಹಾಕಿದನು.

**ತತಃ ಶಕ್ರಾದಯೋ ದೇವಾ ಹೃಷ್ಟಾ ರಾವಣ ನಿಗ್ರಹಾತ್ ।**
**ರಘೂತ್ತಮಸ್ಯೋತ್ತಮಾಂಗೇ ಪುಷ್ಪವೃಷ್ಟಿಮಕುರ್ವತ ॥ ೭ ॥**

ತತಃ = ನಂತರ, ಶಕ್ರಾದಯಃ = ಇಂದ್ರನೇ ಮೊದಲಾದ, ದೇವಾಃ = ದೇವತೆಗಳು, ರಾವಣ ನಿಗ್ರಹಾತ್ = ರಾವಣನ ನಾಶದಿಂದ, ಹೃಷ್ಟಾಃ = ಸಂತೋಷಗೊಂಡು ರಘೂತ್ತಮಸ್ಯ = ರಾಮನ, ಉತ್ತಮಾಂಗೇ = ಶಿರಸ್ಸಿನ ಮೇಲೆ, ಪುಷ್ಪವೃಷ್ಟಿಂ = ಹೂ ಮಳೆಯನ್ನು, ಅಕುರ್ವತ = ಕರೆದರು.

ನಂತರ ಇಂದ್ರಾದಿ ದೇವತೆಗಳು ರಾವಣವಧೆಯಿಂದ ಸಂತೋಷಗೊಂಡು ರಾಮಚಂದ್ರನ ಶಿರಸ್ಸಿನಲ್ಲಿ ಪುಷ್ಪವೃಷ್ಟಿ ಸುರಿಸಿದರು.

**ರಾಕ್ಷಸಾನಾಮಧಿಪತಿಂ ಕೃತ್ವಾ ರಾಮೋ ವಿಭೀಷಣಃ ।**
**ಅಗ್ನಿಪ್ರವೇಶ ಸಂಶುದ್ಧಾಂ ಪರಿಜಗ್ರಾಹ ಮೈಥಿಲೀಂ ॥ ೭ ॥**

ರಾಮಃ = ರಾಮನು, ವಿಭೀಷಣಂ = ವಿಭೀಷಣನನ್ನು, ರಾಕ್ಷಸಾನಾಂ = ರಾಕ್ಷಸ ರಿಗೆ, ಅಧಿಪತಿಂ = ಯಜಮಾನನನ್ನಾಗಿ, ಕೃತ್ವಾ = ಮಾಡಿ, ಅಗ್ನಿಪ್ರವೇಶ ಸಂಶುದ್ಧಾಂ = ಅಗ್ನಿಪ್ರವೇಶ ಪರೀಕ್ಷೆಯಿಂದ ಪರಿಶುದ್ಧಳಾದ, ಮೈಥಿಲೀಂ = ಸೀತೆಯನ್ನು, ಪರಿಜಗ್ರಾಹ = ಪರಿಗ್ರಹಿಸಿದನು.

ರಾಮನು ವಿಭೀಷಣನನ್ನು ರಾಕ್ಷಸರಿಗೆ ಅಧಿಪತಿಯನ್ನಾಗಿ ಮಾಡಿ ಅಗ್ನಿಪ್ರವೇಶದಿಂದ ಪರಿಶುದ್ಧಳಾದ ಸೀತೆಯನ್ನು ಪರಿಗ್ರಹಿಸಿದನು.

**ಪುರಂದರ ವರಾಣೇಷು ಜೀವಯಿತ್ವಾ ಪ್ಲವಂಗಮಾನ್ ।**
**ತೋಷಯದ್ರಾಮಚಂದ್ರೋ ವಿವಿಧೈರ್ಧನಸಂಚಯೈಃ ॥ ೮ ॥**

ಪುರಂದರ ವರೇಣ = ಇಂದ್ರನ ವರದಿಂದ, ಪ್ಲವಂಗಮಾನ್ = ವಾನರರನ್ನು, ಆಶು = ಬೇಗನೆ, ಜೀವಯಿತ್ವಾ = ಜೀವಿಸುವಂತೆ ಮಾಡಿ, ರಾಮಚಂದ್ರಃ = ರಾಮನು, ವಿವಿಧೈಃ = ವಿಧವಿಧವಾದ, ಧನಸಂಚಯೈಃ = ಧನದಾನದಿಂದ, ಅತೋಷಯತ್ = ಸಂತೋಷವನ್ನು ಉಂಟುಮಾಡಿದನು.

ಇಂದ್ರನ ವರದಿಂದ ವಾನರರನ್ನು ಶೀಘ್ರವೇ ಬದುಕಿಸಿ ರಾಮನು ವಿವಿಧವಾದ ಧನ ದಾನದ ಮೂಲಕ ಅವರಿಗೆಲ್ಲಾ ಸಂತೋಷವನ್ನುಂಟುಮಾಡಿದನು.

**ತತಃ ಪುಷ್ಪಕಮಾರುಹ್ಯ ಸೀತಯಾ ಸಹಲಕ್ಷ್ಮಣಃ ।**
**ನಿರ್ಯಯೌ ವಾನರೈಸ್ಸಾಕಂ ರಾಮೋರಕ್ಷೋಽಧಿಪೇನ ಚ ॥ ೯ ॥**

ತತಃ = ನಂತರ, ರಾಮಃ = ರಾಮನು, ಸೀತಯಾ ಸಹ = ಸೀತೆಯ ಜೊತೆಯಲ್ಲಿ, ಸಲಕ್ಷ್ಮಣಃ = ಲಕ್ಷ್ಮಣನೊಡನೆಯೂ, ವಾನರೈಃ = ವಾನರರಿಂದ, ರಕ್ಷೋಽಧಿಪೇನ ಚ = ರಾಕ್ಷಸರ ಅಧಿಪನಾದ ವಿಭೀಷಣನಿಂದಲೂ, ಸಾಕಂ = ಕೂಡಿದವನಾಗಿ, ಪುಷ್ಪಕಂ = ಪುಷ್ಪಕ ವಿಮಾನವನ್ನು, ಆರುಹ್ಯ = ಹತ್ತಿ, ನಿರ್ಯಯೌ = ಹೊರಟನು.

ನಂತರ ರಾಮನು ಸೀತೆ, ಲಕ್ಷ್ಮಣ, ವಾನರರು ಮತ್ತು ರಾಕ್ಷಸ ರಾಜ ವಿಭೀಷಣ ಇವರುಗಳಿಂದ ಕೂಡಿ ಪುಷ್ಪಕ ವಿಮಾನದಲ್ಲಿ ಕುಳಿತು ಹೊರಟನು.

**ಅಯೋಧ್ಯಾಂ ಪ್ರತ್ಯಸೌಗಚ್ಛನ್ ಪ್ರೇಷಯಿತ್ವಾಽನಿಲಾತ್ಮಜಂ ।**
**ಭರತಸ್ಯ ಮತಂ ಜ್ಞಾತ್ವಾ ನಂದಿಗ್ರಾಮ ಮುಪಾಗಮತ್ ॥ ೧೦ ॥**

(ರಾಮಃ = ರಾಮನು), ಅಯೋಧ್ಯಾಂ = ಅಯೋಧ್ಯೆಯನ್ನು, ಪ್ರತಿ = ಕುರಿತು, ಗಚ್ಛನ್ = ಹೋಗುತ್ತಾ, ಅನಿಲಾತ್ಮಜಂ = ಹನುಮಂತನನ್ನು, ಪ್ರೇಷಯಿತ್ವಾ = ಕಳುಹಿಸಿ, ಭರತಸ್ಯ = ಭರತನ, ಮತಂ = ಅಭಿಪ್ರಾಯವನ್ನು, ಜ್ಞಾತ್ವಾ = ತಿಳಿದು, ನಂದಿಗ್ರಾಮಂ = ನಂದಿಗ್ರಾಮವನ್ನು, ಉಪಾಗಮತ್ = ಬಂದು ಸೇರಿದನು.

ಅಯೋಧ್ಯೆಯನ್ನು ಕುರಿತು ಹೊರಟ ರಾಮನು ಆಂಜನೇಯನನ್ನು ಕಳುಹಿಸಿ ಭರತನ ಅಭಿಪ್ರಾಯವನ್ನು ತಿಳಿದು ನಂದಿಗ್ರಾಮಕ್ಕೆ ಬಂದು ಸೇರಿದನು.

**ಭ್ರಾತೃಭಿಸ್ಸಹಸಂಗಮ್ಯ ವೇಷಂ ಸಂತ್ಯಜ್ಯ ತಾಪಸಂ ।**
**ಅಯೋಧ್ಯಾಂ ಪ್ರಾವಿಶತ್ ರಾಮಃ ಪ್ರೀತೈರ್ಬಂಧುಜನೈಸ್ಸಹ ॥ ೧೧ ॥**

ರಾಮಃ = ರಾಮನು, ಭ್ರಾತೃಭಿಃ ಸಹ = ಸೋದರರೊಡನೆ, ಸಂಗಮ್ಯ = ಸೇರಿ, ತಾಪಸ ವೇಷಂ = ತಪಸ್ವಿಯ ವೇಷವನ್ನು, ಸಂತ್ಯಜ್ಯ = ತೆಗೆದುಹಾಕಿ, ಆಯೋ-

ಧ್ಯಾಂ = ಅಯೋಧ್ಯೆಯನ್ನು, ಪ್ರೀತೈಃ = ಸಂತೋಷಗೊಂಡ, ಬಂಧುಜನೈಃ = ಬಂಧು ಜನರ, ಸಹ = ಜೊತೆಯಲ್ಲಿ, ಪ್ರಾವಿಶತ್ = ಪ್ರವೇಶಿಸಿದನು.

ರಾಮನು ಸೋದರರ ಸಮೇತನಾಗಿ ತಪಸ್ವಿಯ ವೇಷವನ್ನು ತ್ಯಜಿಸಿದವನಾಗಿ ಸಂತೋಷಗೊಂಡ ಬಂಧುಜನರ ಜೊತೆಯಲ್ಲಿ ಅಯೋಧ್ಯೆಯನ್ನು ಪ್ರವೇಶಿಸಿದನು.

**ವಸಿಷ್ಠೋಽಥ ದ್ವಿಜೈಸ್ಸಾರ್ಧಂ ಮಂತ್ರಿಸಾಮಂತಸನ್ನಿಧೌ ।**
**ಸೀತಯಾ ಸಹಿತಂ ರಾಮಮಭ್ಯಷಿಂಚದ್ಯಥಾವಿಧಿ** ॥ ೧೨ ॥

ಅಥ = ನಂತರ, ವಸಿಷ್ಠಃ = ವಸಿಷ್ಠ ಋಷಿಗಳು, ದ್ವಿಜೈಃ ಸಾರ್ಧಂ = ಬ್ರಾಹ್ಮಣ ರಿಂದ ಒಡಗೊಂಡು, ಮಂತ್ರಿ ಸಾಮಂತ ಸನ್ನಿಧೌ = ಮಂತ್ರಿ ಮತ್ತು ಸಾಮಂತರ ಸಾನ್ನಿಧ್ಯದಲ್ಲಿ, ಸೀತಯಾ ಸಹಿತಂ = ಸೀತೆಯ ಜೊತೆಯಲ್ಲಿ, ರಾಮಂ = ರಾಮನನ್ನು, ಯಥಾವಿಧಿ = ವಿಧಿವತ್ತಾಗಿ, ಅಭ್ಯಷಿಂಚತ್ = ಪಟ್ಟಾಭಿಷಿಕ್ತನನ್ನಾಗಿ ಮಾಡಿದರು.

ನಂತರ ವಸಿಷ್ಠ ಮಹರ್ಷಿಗಳು ಬ್ರಾಹ್ಮಣರ ಜೊತೆಯಲ್ಲಿ ಮಂತ್ರಿ ಸಾಮಂತರ ಮುಂದೆ ಸೀತಾಸಮೇತನಾದ ರಾಮಚಂದ್ರನಿಗೆ ವಿಧಿವತ್ತಾಗಿ ಪಟ್ಟಾಭಿಷೇಕ ಮಾಡಿದರು.

**ಆಹ್ಲಾದಯನ್ ಜಗತ್ ಸರ್ವಂ ಪೌರ್ಣಮಾಸ್ಯಾಂ ಯಥಾಶಶೀ ।**
**ಅಯೋಧ್ಯಾಮವಸದ್ರಾಮಃ ಸೀತಯಾ ಸಹಿತಶ್ಚಿರಮ್** ॥ ೧೩ ॥

ಪೌರ್ಣಮಾಸ್ಯಾಂ = ಪೌರ್ಣಮಿಯಂದು, ಶಶೀ = ಚಂದ್ರನು, ಯಥಾ = ಹೇಗೆಯೋ, ತಥಾ = ಹಾಗೆ, ಸರ್ವಂ ಜಗತ್ = ಪ್ರಪಂಚವೆಲ್ಲವನ್ನೂ, ಆಹ್ಲಾ-ದಯನ್ = ಸಂತೋಷಪಡಿಸುತ್ತಾ, ಸೀತಯಾ ಸಹಿತಃ = ಸೀತೆಯಿಂದ ಕೂಡಿದ, ರಾಮಃ = ರಾಮಚಂದ್ರನು, ಚಿರಂ = ಬಹಳಕಾಲ, ಅಯೋಧ್ಯಾಂ = ಅಯೋಧ್ಯೆಯಲ್ಲಿ ಅವಸತ್ = ವಾಸಿಸಿದನು.

ಪೌರ್ಣಮಿಯ ಚಂದ್ರನು ಹೇಗೆ ಪ್ರಪಂಚವೆಲ್ಲವನ್ನೂ ಸಂತೋಷಪಡಿಸುತ್ತಾನೆಯೋ ಹಾಗೆಯೇ ಸೀತೆಯಿಂದ ಕೂಡಿದ ರಾಮಚಂದ್ರನು ಬಹಳಕಾಲ ಅಯೋಧ್ಯೆಯಲ್ಲಿ ವಾಸಮಾಡಿದನು.

॥ ಓಂ ಶಮ್ ॥

# ಪಾಠಾಂತರ ವಿಷಯಗಳು

**ಬಾಲಕಾಂಡ :**

| | | ಪುಸ್ತಕಪಾಠ | ಪಾಠಾಂತರ |
|---|---|---|---|
| ೭ನೇ | ಶ್ಲೋಕ | ಲಂಕಾಯಾಂ ಸುಖಮಾವಸನ್ | ಲಂಕಾಂ ಚ ಸುಖಮಾವಸನ್ |
| ೮ | ,, | ತಸ್ಯಾಂ ಲೇಭೇ ಮಹಾವೀರಂ | ತಸ್ಯಾಮುತ್ಪಾದಯಾಮಾಸ |
| ೧೯ | ,, | ಸುಗ್ರೀವಮಪಿ ಮಾರ್ತಾಂಡಃ | ಸುಗ್ರೀವಮಪಿ ಮಾರ್ತಾಂಡೋ |
| ೨೫ | ,, | ಸಾಧ್ವ್ಯೋ ಗರ್ಭಮ-ಧಾರಯನ್ | ನೃಪಾನ್ ಗರ್ಭಮಧಾರಯನ್ |

**ಅರಣ್ಯಕಾಂಡ :**

| | | | |
|---|---|---|---|
| ೪ನೇ | ಶ್ಲೋಕ | ಬ್ರಾಹ್ಮಮಸ್ತ್ರಂ ಚ | ಬ್ರಾಹ್ಮಂ ಚಾಸ್ತ್ರಂ ಚ |
| ೧೪ | ,, | ಸೋಪಿ ಹೇಮಮೃಗೋ | ಸೋಪಿ ಸ್ವರ್ಣಮೃಗೋ |
| ೧೮ | ,, | ತ್ವರಾನ್ವಿತಃ | ಮುದಾನ್ವಿತಃ |
| ೨೧ | ,, | ನಿಯುಂಕ್ತೇ ಸ್ಮ | ನಿಯುಯೋಜಸ್ಮ |
| ೨೮ | ,, | ಮಭ್ಯಗಾತ್ | ಮಭ್ಯಯಾತ್ |

**ಕಿಷ್ಕಿಂಧಾಕಾಂಡ :**

| | | | |
|---|---|---|---|
| ೪ನೇ | ಶ್ಲೋಕ | ಮಶೇಷೇಣ | ಮಶೇಷಂ ಚ |
| ೯ | ,, | ರಣಾಯಾಥಾಹ್ವಯತ್ | ರಣಾಯಾಹ್ವಯಿತ |
| ೧೮ | ,, | ತತ್ರ ಸಂಪಾತಿನಾ | ತೇತ್ರ ಸಂಪಾತಿನಾ |

**ಸುಂದರಕಾಂಡ :**

| | | | |
|---|---|---|---|
| ೨ನೇ | ಶ್ಲೋಕ | ಸ ತೋಷಯಿತ್ವಾ | ಸ ಸಮುಲ್ಲಂಘ್ಯ |
| ೬ | ,, | ಮದನಾರ್ದಿತಃ | ಮದನಾರ್ದಿತಾ |
| ೧೩ | ,, | ವಾನರಾಂಸ್ತಾನುಪಾಗಮತ್ | ವಾನರಾನ್ ಸಮುಪಾಗಮತ್ |
| ೧೪ | ,, | ನಿವೇದ್ಯ ಸಕಲಂ | ನಿವೇದಯಿತ್ವಾ ಸಕಲಂ |

| | ಪುಸ್ತಕಪಾಠ | ಪಾಠಾಂತರ |
|---|---|---|
| **ಯುದ್ಧಕಾಂಡ :** | | |
| ೨೦ನೇ ಶ್ಲೋಕ | ಹನುಮತ್ಪ್ರಮುಖೇಷು ಸಃ | ಹನುಮತ್ಪ್ರಮುಖೇಷು ಚ |
| ೨೧ ,, | ಸ್ಸಂ ಪರೀವೃತಃ | ಸ ಪರೀವೃತಃ |
| ೨೬ ,, | ಅಜಯ್ಯೋ ಭವಿತಾ | ಅಜೇಯೋ ಭವತಿ |
| ೩೬ ,, | ವಿಲಂಬಿತಂ | ವಿಲಂಬನಂ |
| ೩೭ ,, | ಪಿತುರ್ವರ್ಣವು | ಪಿತಾಸ್ಮ್ಯಹಂ |
| ೪೬ ,, | ಯದ್ವೈದೇಹ್ಯಾ | ತದ್ವೈದೇಹ್ಯಾ |
| ೫೯ ,, | ಚಾತಕಾಶ್ಚ | ಚಾತಕಾಸ್ತು |
| ೬೭ ,, | ಪ್ರಾಣಪ್ರಿಯ | ಪ್ರಾಣಾತ್ ಪ್ರಿಯ |
| **ಉತ್ತರಕಾಂಡ** | | |
| ೨ನೇ ಶ್ಲೋಕ | ಸಮಾಶ್ವಸ್ಯ | ಸಮಾಶ್ವಾಯ |
| ೩ ,, | ನಿಹತ್ಯೈಕಾ | ನಿಹತ್ಯೈನಾ |
| ೫ ,, | ಪುನಶ್ಚೈವ | ಪುನಶ್ಚೈವಂ |
| ೭ ,, | ನಿಜರೂಪಂ | ನಿಜಂ ರೂಪಂ |

# ಶ್ರೀರಾಮೋದಂತದೊಳಗಿನ ವಿಶೇಷಗಳು

**ಬಾಲಕಾಂಡ :** ಇದರಲ್ಲಿ ರಾವಣನ ದುರಾಡಳಿತದಿಂದ ಕಥೆಯು ಆರಂಭವಾಗಿದೆ. ಪರಮಾತ್ಮನ ಪ್ರಾರ್ಥನೆಯ ನಂತರ ವಿಶ್ರವಸ್ ಎಂಬುವವನ ಮಗನಾದ ರಾವಣನ ಕಥೆ ಆರಂಭವಾಗುತ್ತದೆ. ಅವನಿಗೆ ಕುಂಭಕರ್ಣ, ವಿಭೀಷಣರು ತಮ್ಮಂದಿರು. ಅವರು ಬ್ರಹ್ಮನನ್ನು ತಪಸ್ಸಿನಿಂದ ಪ್ರತ್ಯಕ್ಷೀಕರಿಸಿಕೊಂಡು ತಮಗೆ ಇಷ್ಟವಾದ ವರವನ್ನು ಬೇಡುತ್ತಾರೆ. ರಾವಣನು ಮನುಷ್ಯನಲ್ಲದವರಿಂದ ಅವಧ್ಯತ್ವ ಬೇಡಿದರೆ ಕುಂಭಕರ್ಣನು ನಿರ್ದೇವತ್ವವನ್ನು ಬೇಡಲು ಹೋಗಿ ಗಡಿಬಿಡಿಯಲ್ಲಿ ನಿದ್ರಾತ್ವವನ್ನು ಬೇಡುತ್ತಾನೆ ಎಂಬುದು ಇಲ್ಲಿನ ಚಮತ್ಕಾರ. ವಿಭೀಷಣನು ವಿಷ್ಣುಭಕ್ತಿಯನ್ನು ಬೇಡುತ್ತಾನೆ.

ವಾಲ್ಮೀಕಿ ರಾಮಾಯಣದಲ್ಲಿ ಬಾಲಕಾಂಡದ ಹದಿನೈದನೇ ಸರ್ಗದಲ್ಲಿ ಬರುವ ವಿಷಯ ಇಲ್ಲಿ ಆರಂಭದಲ್ಲಿಯೇ ಹೇಳಲ್ಪಟ್ಟಿದೆ. ಆದರೆ ರಾವಣನು ದೇವತೆಗಳಿಗೆ ನೀಡುತ್ತಿದ್ದ ತೊಂದರೆ ಇಲ್ಲಿ ಇನ್ನೂ ಚೆನ್ನಾಗಿ ವರ್ಣಿತಗೊಂಡಿದೆ.

ರಾವಣನು ಕುಬೇರನನ್ನು ಸೋಲಿಸಿ ಪುಷ್ಪಕ ವಿಮಾನವನ್ನೂ, ಲಂಕಾ ಪಟ್ಟಣವನ್ನೂ ವಶಪಡಿಸಿಕೊಳ್ಳುತ್ತಾನೆ. ರಾಕ್ಷಸರು ಪಾತಾಳದಲ್ಲಿ ವಾಸಿಸುತ್ತಿದ್ದವರು ಈಗ ನಿರ್ಭೀತಿಯಿಂದ ಲಂಕೆಯಲ್ಲಿ ನೆಲಸಿ ಎಲ್ಲರಿಗೂ ತೊಂದರೆ ಕೊಡಲುಪಕ್ರಮಿಸುತ್ತಾರೆ. ಮಯನ ಮಗಳಾದ ಮಂಡೋದರಿಯನ್ನು ರಾವಣನು ವರಿಸಿ ಅವಳಿಂದ ಮೇಘನಾದನನ್ನು ಪಡೆಯುತ್ತಾನೆ. ಈ ವೀರನು ಇಂದ್ರನನ್ನು ಜಯಿಸಿ ಕಲ್ಪವೃಕ್ಷ, ಚಿಂತಾಮಣಿ ಮುಂತಾದುವನ್ನು ವಶಪಡಿಸಿಕೊಂಡು ಅವುಗಳನ್ನೂ ತಾನೇ ಅನುಭವಿಸುತ್ತಿರುತ್ತಾನೆ. ಹೀಗೆ ಭೂಮಿ, ಪಾತಾಳ ಎಲ್ಲವನ್ನೂ ಆಕ್ರಮಿಸಿ ರಾವಣನು ಋಷಿ, ಬ್ರಾಹ್ಮಣರಿಗೆ ತೊಂದರೆ ನೀಡುತ್ತಾ ಸ್ತ್ರೀಯರನ್ನೂ ಬಲಾತ್ಕಾರವಾಗಿ ವಶಪಡಿಸಿಕೊಂಡು ಲೋಕಕಂಟಕನಾಗಿ ಮೆರೆಯುತ್ತಾನೆ ಎಂದು ೧೧ ಶ್ಲೋಕಗಳಲ್ಲಿ ವಿವರಿತವಾಗಿರುವ ವಿಚಾರ ಸುಂದರ, ಮನೋಜ್ಞ.

ಕವಿ ರಾಮಕಥೆಯನ್ನು ಆರಂಭಿಸುವುದು ೩೩ನೇ ಶ್ಲೋಕದಿಂದ. ಇದಕ್ಕೆ ಮೊದಲು ವಿಷ್ಣು ತಾನು ರಾಮನಾಗಿ ಅವತರಿಸುವುದಾಗಿಯೂ, ದೇವತೆಗಳು ತಮ್ಮ ಅಂಶದಿಂದ ಕಪಿಗಳನ್ನು ಸೃಷ್ಟಿಸಬೇಕೆಂದೂ, ಆ ಕಪಿಗಳು ತನಗೆ ರಾವಣ ನಿಗ್ರಹಣದ ಸಂದರ್ಭದಲ್ಲಿ ನೆರವಾಗಬೇಕೆಂದೂ ನಿಯಮನ ಮಾಡುತ್ತಾನೆ. ಅದರಂತೆ ಇಂದ್ರನಿಗೆ ವಾಲಿಯೂ, ಸೂರ್ಯನಿಗೆ ಸುಗ್ರೀವನೂ, ವಾಯುವಿಗೆ ಹನುಮಂತನೂ, ಬ್ರಹ್ಮನಿಗೆ

ಜಾಂಬವಂತನೂ ಜನಿಸುವ ಸ್ತೋತ್ರಗಳ ಜೋಡಣೆ ರಮ್ಯವಾಗಿದೆ. ವಾಲಿಯು ರಾಮನಿಗೆ ನೆರವಾಗದಿದ್ದರೂ ರಾಮಾಯಣವು ಬೆಳೆಯಲು ಸಹಾಯಕವಾಗಿದ್ದನೆಂದು ನಾವು ತಿಳಿದುಕೊಳ್ಳಬೇಕು.

ದಶರಥನನ್ನು ಸೂರ್ಯವಂಶದ ಪಾರ್ಥಿವನೆಂದು ಹೇಳಲ್ಪಟ್ಟಿದೆ. ಅಯೋಧ್ಯೆ, ಕೋಸಲ ಇವುಗಳಿಗೂ ದಶರಥನಿಗೂ ಏನು ಸಂಬಂಧ ಇವುಗಳ ಪ್ರಸ್ತಾಪವಿಲ್ಲ. ಅವನಿಗೆ ಮೂರುಜನ ರಾಣಿಯರಿದ್ದರೂ ಅವರಲ್ಲಿ ಸಂತಾನ ಹೊಂದಲಿಲ್ಲ ಎಂಬ ಶ್ಲೋಕ ಅರ್ಥವತ್ತಾಗಿದೆ.

ಯಜ್ಞ ಕುಂಡದಿಂದ ಓರ್ವನು ಪಾಯಸದ ಪ್ರಸಾದವನ್ನು ಹಿಡಿದುಕೊಂಡು ರಾಜನಿಗೆ ನೀಡಿದನು ಎಂದಿದೆ. ರಾಜನು ತನ್ನ ಪತ್ನಿಯರಿಗೆ ಆ ಚರುವನ್ನು ನೀಡಲು ಅದರ ಪ್ರಾಶನದಿಂದಲೋ ಎಂಬಂತೆ ಅವರು ಗರ್ಭಧಾರಣೆ ಮಾಡಿದರು ಎನ್ನುವುದೂ ಅರ್ಥಪೂರ್ಣವಾಗಿದೆ. ಕೌಸಲ್ಯೆ, ಕೈಕೆಯಿ ಇವರು ತಮ್ಮ ಪಾಲಿನ ಪಾಯಸದಲ್ಲಿ ಅರ್ಧಾರ್ಧವನ್ನು ಸುಮಿತ್ರೆಗೆ ನೀಡಿದರು ಅದರಿಂದ ಸುಮಿತ್ರೆಗೆ ಅವಳಿ ಜವಳಿ ಮಕ್ಕಳು ಜನಿಸಿದರೆಂಬ ವಿವರ ಇಲ್ಲಿ ಕಂಡುಬರುವುದಿಲ್ಲ. ಇಲ್ಲಿ ಒಂದು ಪಾಠದಲ್ಲಿ "ನೃಪಾನ್ ಗರ್ಭಮಧಾರಯನ್" ಎಂದಿರುವುದು "ಸಾಧ್ವ್ಯಃಗರ್ಭಮಧಾರಯನ್" ಎಂದು ಬದಲಾಯಿಸಲ್ಪಟ್ಟಿದೆ. ರಾಜನಿಂದ ಗರ್ಭಧಾರಣೆ ಮಾಡಿದರು ಎಂಬ ವಾದ ಸರಣಿ ಯನ್ನು ಸಾಧ್ವಿಯರು ಗರ್ಭವನ್ನು ಧರಿಸಿದರು ಎಂದು ಮಾರ್ಪಡಿಸಿದ್ದಾರೆ.

ವವ್ರೇ, ಅಜೀಜನತ್ ಮುಂತಾದ ಹಲವು ಪದಪ್ರಯೋಗಗಳು ಮತ್ತು ಶ್ಲೋಕದ ಸರಣಿಗಳು ಹೊಸಬಗೆಯವುಗಳಾಗಿ ತೋರುತ್ತವೆ. ದಶರಥನ ಕುಮಾರರಿಗೆ ಮತ್ತು ಜನಕ ಮತ್ತು ಅವನ ಸೋದರನ ಕುಮಾರಿಯರಿಗೆ ನಡೆದ ವಿವಾಹವನ್ನು "ರಾಮಾದಿಭ್ಯಸ್ತತಸ್ತೇಭ್ಯಃ ಸೀತಾದ್ಯಾಃ ಕನ್ಯಕಾದದಾ" ಎಂಬುವಷ್ಟರಲ್ಲಿ ಕವಿ ಮುಗಿಸಿಬಿಟ್ಟಿದ್ದಾನೆ. ರಾಮಾದಿಗಳಿಗೆ ಸೀತಾದಿ ಕನ್ಯಕೆಯರನ್ನು ಕೊಟ್ಟು ವಿವಾಹ ವಾಯಿತು ಎಂದು ಅರ್ಥ. ರಾಮನ ಸೋದರ ಹೆಸರು ಸೀತೆಯು ಸೋದರಿಯರ ಹೆಸರು, ಸೀತೆಗೆ ಅವರು ಹೇಗೆ ಸೋದರಿಯರು ಎಂಬ ವಿವರಣೆ ಇಲ್ಲ.

**ಅಯೋಧ್ಯಾಕಾಂಡ :** ರಾಜ ದಶರಥನು ಸುಮಂತ್ರನಿಂದ ರಾಮನು ಕಾಡಿ ನಲ್ಲಿ ಇರುವುದನ್ನು ಕೇಳಿ ತಿಳಿದು "ರಾಮರಾಮೇತಿ ವಿಲಪನ್ ದೇಹಂ ತ್ಯಕ್ತ್ವಾ ದಿವಂ ಯಯೌ" ಈ ರೀತಿ ದೇಹಂ ತ್ಯಕ್ತ್ವಾ ದಿವಂ ಯಯೌ ಪ್ರಾಯಶಃ ರಾಮೋ ದಂತದಲ್ಲಿ 3–4 ಸಂದರ್ಭಗಳಲ್ಲಿ ವರ್ಣಿತವಾಗಿವೆ.

**ಅರಣ್ಯಕಾಂಡ :** ಜಟಾಯುವು ರಾಮನ ತಂದೆಯ ಸ್ನೇಹಿತ. ದಂಡಕಾರಣ್ಯದಲ್ಲಿ ರಾಮನು ಅವನನ್ನು ಕಂಡು ಸೀತೆಯ ಪಾಲನೆಗೆಂದು ಅವನನ್ನು ಪ್ರಾರ್ಥಿಸುತ್ತಾನೆಂದು ಹೇಳಲಾಗಿದೆ.

ವವ್ರೇ ಎನ್ನುವ ಪದ ಹಲವಾರು ಬಾರಿ ಬಳಸಲ್ಪಟ್ಟಿದೆ. ಏಳನೇ ಶ್ಲೋಕದಲ್ಲೇ ಎರಡು ಬಾರಿ ಕಂಡುಬರುತ್ತದೆ. ಬೇರೆ ಪದವನ್ನು ಪ್ರಯೋಗಿಸಬಹುದಾಗಿತ್ತಲ್ಲವೆ ಎನಿಸುತ್ತದೆ.

ರಾವಣನು ತನ್ನ ಕತ್ತಿ ಚಂದ್ರಹಾಸದಿಂದ ಜಟಾಯುವನ್ನು ಕತ್ತರಿಸಿದನು ಎಂದಿದೆ. ಅನೇಕರಿಗೆ ರಾವಣನ ಕತ್ತಿಯ ಹೆಸರು ತಿಳಿಯದು. ಜಟಾಯುವಿನ ಅಂತ್ಯಕರ್ಮವನ್ನು ನೆರವೇರಿಸಿ ಅಯೋಮುಖಿ ಎಂಬ ರಾಕ್ಷಸಿಯನ್ನು ಶ್ರವಣನಾಸಿಕಾಚ್ಛೇದ ಮಾಡಿ ಕಳುಹಿಸಿದನು ಎನ್ನುವ ವಿಷಯ ಪ್ರಸ್ತಾಪಿಸಲಾಗಿದೆ. ವಾಲ್ಮೀಕಿ ರಾಮಾಯಣದಲ್ಲಿ ಈ ಪ್ರಸಂಗ ಸ್ಥೂಲವಾಗಿ ಇದ್ದಿದ್ದರೂ ಅನೇಕರಿಗೆ ಈ ರಾಕ್ಷಸಿಯ ವಿಚಾರ ತಿಳಿಯದು.

**ಕಿಷ್ಕಿಂಧಾಕಾಂಡ :** ರಾಮನು ವಾಲಿಯನ್ನು ವಧಿಸುತ್ತೇನೆ ಎಂದು ಪ್ರತಿಜ್ಞೆ ಮಾಡಿದ್ದಕ್ಕೆ ಉತ್ತರ ರೂಪವಾಗಿ ಸುಗ್ರೀವನು ಸೀತೆಯನ್ನು ತೋರಿಸುತ್ತೇನೆ ಎಂದು ಪ್ರತಿಜ್ಞೆ ಮಾಡಿದನು ಎನ್ನುವ ಸ್ತೋತ್ರ ಅರ್ಥವತ್ತಾಗಿದೆ. ರಾಮನು ಒಂದೇ ಬಾಣವನ್ನು ಪ್ರಯೋಗಿಸಿ ಏಳು ತಾಳೀಮರಗಳನ್ನೂ ಸುಗ್ರೀವನ ಶಂಕೆಯನ್ನೂ ಕೂಡ ಕಡಿದು ಹಾಕಿದನು ಎನ್ನುವ ಶ್ಲೋಕ ವಿಚಾರವೂ ಮನನೀಯವಾಗಿದೆ.

ವಾಲಿಯು ರಾಮನಿಂದ ಬಾಣ ಪ್ರಯೋಗಿಸಲ್ಪಟ್ಟು—"ದೇಹಂ ತ್ಯಕ್ತ್ವಾ ದಿವಂ ಯಯೌ"–ಸತ್ತನು ಎಂದಾಗ ದಶರಥನ ಮರಣದ ಶ್ಲೋಕ ನೆನಪಿಗೆ ಬರುತ್ತದೆ.

ಇಲ್ಲಿ ಸ್ವಯಂಪ್ರಭೆಯ ಅಥವಾ ಅವಳ ಗುಹೆಯಲ್ಲಿ ಕಪಿಗಳು ದಿವಸಗಳನ್ನು ಕಳೆದು ತಮ್ಮ ಕಾರ್ಯ ಮರೆತಿದ್ದನ್ನು ವಿವರಿಸಿಲ್ಲ. ಅವರು ವಿಂಧ್ಯಗಿರಿಗೆ ಬಂದರು. ಅಲ್ಲಿ ಪ್ರಾಯೋಪವೇಶ ಮಾಡತ್ತಿದ್ದಾಗ ಸೀತೆಯ ವಾರ್ತೆಯನ್ನು ಸಂಪಾತಿಯಿಂದ ಕೇಳಿದರು ಎಂದಿದೆ. ಸಂಪಾತಿ ಯಾರೆಂಬುದರ ವಿವರವಿಲ್ಲ. ನಂತರ ಅವರೆಲ್ಲ ಸಮುದ್ರದ ಸಮೀಪ ಸೇರಿದರು ಎಂದು ವಿವರಣೆಗೊಂಡಿದೆ.

ಆಂಜನೇಯನ ವಿಚಾರ ಇಲ್ಲಿ ಚೆನ್ನಾಗಿದೆ.

**ಸ್ವಪ್ರಭಾವ ಪ್ರಶಂಸಾಭಿಃ ಭೃಶಂ ಜಾಂಬವದುಕ್ತಿಭಿಃ ।**
**ಸಂವರ್ಧಿತೋ ಮಹೇಂದ್ರಾದ್ರಿಂ ಆರುರೋಹಾನಿಲಾತ್ಮಜಃ ॥**

**ಸುಂದರಕಾಂಡ :** ಹನುಮಂತ ರಾವಣರ ಸಂವಾದವು ಕೇವಲ "ಪ್ರತಾಪಂ ರಘುನಾಥಸ್ಯ ರಾವಣಾಯ ನ್ಯವೇದಯತ್" ಎನ್ನುವುದರೊಳಗೇ ಮುಕ್ತಾಯವಾಗಿದೆ. ಹದಿನಾಲ್ಕು ಶ್ಲೋಕಗಳಲ್ಲಿ ಸುಂದರಕಾಂಡದ ಸ್ವಾರಸ್ಯವೆಲ್ಲಾ ಇಲ್ಲಿ ಮುಕ್ತಾಯ ಗೊಂಡಿದೆ.

**ಯುದ್ಧಕಾಂಡ :** ಶುಕಸಾರಣರ ವೃತ್ತಾಂತ ಇಲ್ಲಿ ಪ್ರಸ್ತಾಪಿಸಲ್ಪಟ್ಟಿಲ್ಲ. ದೇವಾಂತಕ ನರಾಂತಕರೆಂಬ ರಾಕ್ಷಸರು ಹನುಮಂತ ಮತ್ತು ಅಂಗದರಿಂದ ಸಂಹರಿಸ ಲ್ಪಟ್ಟರು.

ಅನಂತರ ಬಂದ ಅತಿಕಾಯ ಮಹಾಕಾಯರೆಂಬುವರನ್ನು ಲಕ್ಷ್ಮಣನು ಕೊಂದು ಹಾಕಿದನು.

ಕುಂಭಕರ್ಣನ ಮಕ್ಕಳಾದ ಕುಂಭ ಮತ್ತು ನಿಕುಂಭರೆಂಬುವರು ಯುದ್ಧಕ್ಕೆ ಬರಲು ರಾಮ ಸುಗ್ರೀವರು ಅವರನ್ನು ಸಂಹರಿಸಿದರು. ಖರನ ಮಗನಾದ ಮಕರಾಕ್ಷ ನನ್ನು ರಾಮನು ಕೊಂದುಹಾಕಿದನು.

ನಂತರ ರಾವಣನು ಇಂದ್ರಜಿತುವನ್ನು ಕಳುಹಿಸಲು ಅವನು ಮಾಯಾಸೀತೆ ಯನ್ನು ತಂದು ವಾನರರ ಮಧ್ಯೆ ವಧಿಸಲಾಗಿ ಅವರೆಲ್ಲರೂ ಕಂಗಾಲಾಗಿ ರಾಮನಲ್ಲಿಗೆ ಹೋಗಿ ಸೀತೆಯ ಮರಣ ವಾರ್ತೆಯನ್ನು ತಿಳಿಸಿದರು. ಎಲ್ಲರೂ ದುಃಖತಪ್ತರಾಗಿ ದ್ದಾಗ ವಿಭೀಷನು ರಾಕ್ಷಸ ಮಾಯೆಯನ್ನು ತಿಳಿಸಿ ನಿಕುಂಭಿಲೆಯಲ್ಲಿ ಯಾಗ ಮಾಡು ತ್ತಿರುವ ಇಂದ್ರಜಿತುವನ್ನು ಈಗಲೇ ಹೋಗಿ ಸಂಹರಿಸದಿದ್ದಲ್ಲಿ ಯಾಗ ಮುಗಿದ ನಂತರ ಅವನು ಅಜೇಯನಾಗಿಬಿಡುವನು ಎಂದು ಎಚ್ಚರಿಸಲು ಲಕ್ಷ್ಮಣನು ರಾಮನ ಅಪ್ಪಣೆ ಯಂತೆ ವಿಭೀಷಣನೊಡನೆ ಅಲ್ಲಿಗೆ ಹೋಗಿ ಯಾಗವನ್ನು ತ್ಯಜಿಸುವಂತೆ ಮಾಡಿ ಅವ ನೊಡನೆ ಘೋರ ಯುದ್ಧಮಾಡಿ ಅವನನ್ನು ಕೊಂದುಹಾಕಿದನು.

ರಾವಣನು ಇಂದ್ರಜಿತು ಸತ್ತಿದ್ದನ್ನು ಕೇಳಿ ದುಃಖಪಡುತ್ತಾನೆ. ಈ ವರ್ಣನೆ ಎಂಟು ಶ್ಲೋಕಗಳಲ್ಲಿ ಮನಮುಟ್ಟುವಂತೆ ವರ್ಣಿತಗೊಂಡಿದೆ. ಇಲ್ಲಿ ಕವಿಯ ಕೌಶಲ ಚೆನ್ನಾಗಿ ವ್ಯಕ್ತಗೊಂಡಿದೆ.

**ಉತ್ತರಕಾಂಡ :** ರಾಮನು ಮತ್ತೆ ಶಂಕಿಸಿದ್ದರಿಂದ ಸೀತೆಯು ಭೂಮಿ ಯನ್ನು ಪ್ರಾರ್ಥಿಸಿ ಅದರಲ್ಲಿ ಪ್ರವೇಶಿಸಿದ್ದು, ರಾಮನ ನಿರ್ದೇಶನದಂತೆ ಋಷಿಗಳೂ, ಅಯೋಧ್ಯೆಯ ವಾಸಿಗಳೂ ಸರಯೂ ನದಿಯಲ್ಲಿ ಮುಳುಗಿ ಸ್ವರ್ಗಕ್ಕೆ ಹೋಗಿದ್ದೂ, ರಾಮಲಕ್ಷ್ಮಣಾದಿಗಳು ನಿಜರೂಪಧಾರಣ ಮಾಡಿ ತಮ್ಮ ಲೋಕಕ್ಕೆ ಹೋದದ್ದೂ ವರ್ಣಿತವಾಗಿರುವುದು ಈ ರಾಮಾಯಣದ ವೈಶಿಷ್ಟ್ಯ. ಇತರ ರಾಮಾಯಣಗಳಲ್ಲಿ

ಪೌರರು, ಋಷಿಗಳು ಎಲ್ಲರೂ ರಾಮ, ಭರತ, ಶತ್ರುಘ್ನರೊಡನೆಯೇ ಸರಯೂ ನದಿಯನ್ನು ಪ್ರವೇಶಿಸಿದರು ಎಂದು ಹೇಳಲ್ಪಟ್ಟಿದೆ ಹಾಗೆಯೇ ರಾಮಚಂದ್ರನು ತನ್ನ ಮತ್ತು ಸೋದರರ ಎಂಟುಜನ ಮಕ್ಕಳಿಗೂ ರಾಜ್ಯವನ್ನು ವಿಭಾಗಿಸಿ ಕೊಟ್ಟು, ಲವ ಕುಶರ ಪಟ್ಟಾಭಿಷೇಕದ ನಂತರ ಎಲ್ಲರೊಡನೆ ಎಂದರೆ ಇಷ್ಟಪಟ್ಟು ತನ್ನ ಸಂಗಡ ಬಂದವರೊಡನೆ ಸರಯೂನದಿ ಪ್ರವೇಶಮಾಡಿ ವೈಕುಂಠದಲ್ಲಿ ಶೇಷ, ಶಂಖ, ಚಕ್ರ, ಲಕ್ಷ್ಮೀ ಸಮೇತ ವಿಷ್ಣುವಾಗಿ ವಿರಾಜಮಾನನಾದನು ಎಂದಿದೆ. ಆದರೆ ಲಕ್ಷ್ಮಣನು ಮಾತ್ರ ದೂರ್ವಾಸಾಗಮನದಿಂದ ಗಡೀಪಾರು ಶಿಕ್ಷೆಗೆ ಒಳಪಟ್ಟು ಕಾಡಿನಲ್ಲಿ ಮರದ ಕೆಳಗೆ ಕುಳಿತು ಶರೀರ ತ್ಯಾಗಮಾಡಿ ಆದಿಶೇಷರೂಪವನ್ನು ಧಾರಣಮಾಡಿದನು ಎಂದು ವಿವರಿಸಲ್ಪಟ್ಟಿದೆ.

**ಅನುಬಂಧ :** ಹನುಮಂತನು ಓಷಧಿ ಪರ್ವತವನ್ನು ತರುತ್ತಾನೆ. ಅದರ ಗಾಳಿಯಿಂದಲೇ ಎಲ್ಲರೂ ಮೂರ್ಛೆ ತಿಳಿದು ಏಳಲು ಅವನು ಮತ್ತೆ ಅದನ್ನು ಸ್ವಸ್ಥಾನದಲ್ಲಿ ಪ್ರತಿಷ್ಠಾಪನೆ ಮಾಡಿಬಿಡುತ್ತಾನೆ.

ಭರತನ ಮನೋಭಿಪ್ರಾಯ ತಿಳಿದುಬರಲು ರಾಮನು ಹನುಮಂತನನ್ನು ನಂದಿಗ್ರಾಮಕ್ಕೆ ಕಳುಹಿಸಿದನು ಎನ್ನುವಾಗ ರಾಜಕಾರಣದ ಸೂಕ್ಷ್ಮ ಸೂಕ್ಷ್ಮವಾಗಿ ಪ್ರಸ್ತಾಪಗೊಂಡಿದೆ. ಭರತನು ತನಗೆ ರಾಜ್ಯವನ್ನು ಕೊಡುವನೋ ಇಲ್ಲವೋ ಎಂದು ರಾಮನ ಮನಸ್ಸಿನಲ್ಲಿ ಶಂಕೆ ಇರುವುದು ವ್ಯಕ್ತವಾಗುತ್ತದೆ. ಅದನ್ನು ಖಚಿತಪಡಿಸಲು ಹನುಮಂತನನ್ನು ಅಟ್ಟುವಂತೆ ಇಲ್ಲಿ ತಿಳಿಯುತ್ತದೆ. ಭರತನು ತನ್ನನ್ನು ಸ್ವಾಗತಿಸಿದ ನಂತರ ರಾಮನು "ವೇಷಂ ಸಂತ್ಯಜ್ಯ ತಾಪಸಂ" ಎಂದಿರುವುದೂ ಎಷ್ಟೊಂದು ಉಚಿತವೆನಿಸುತ್ತಿದೆ. ಏತಕ್ಕೆಂದರೆ ತನಗೆ ಅಯೋಧ್ಯೆಗೆ ಪ್ರವೇಶ ದೊರೆತ ನಂತರ ಅವನು ಋಷಿ ವೇಷ ಕಳೆಯುತ್ತಾನೆ ಎನ್ನುವುದೂ ರಾಜಕಾರಣದ ಮರ್ಮವೆನಿಸುವುದಿಲ್ಲವೆ?

ಪ್ರಾಯಶಃ ಈ ಗ್ರಂಥದ ಮುಕ್ಕಾಲು ಮೂರುಪಾಲು ಶ್ಲೋಕಗಳು "ತತಃ" ಅಥವಾ "ಅಥ" ಎಂದು ಆರಂಭವಾಗುವುದನ್ನೂ ಗಮನಿಸಬಹುದು. ಆದರೆ ಪದ್ಯಗಳ ತಾತ್ಪರ್ಯವನ್ನು ಬರೆಯುವಾಗ ಹಲವೆಡೆ ಪಾದಗಳ ಅರ್ಥವನ್ನು ಕಥೆಯ ಮುಂದುವರಿಯುವಿಕೆಯ ದೃಷ್ಟಿಯಿಂದ ಕೈಬಿಡಲಾಗಿದೆ.

ಈ ಮೇಲಿನ ಚಾತುರ್ಯ ಅಂಶಗಳಿಂದ ಈ ರಾಮೋದಂತವು ಸುಂದರವಾಗಿ ಕಂಗೊಳಿಸುತ್ತದೆ ಎಂದು ಹೇಳಿ ಈ ಲಘು ಟಿಪ್ಪಣಿಗೆ ಮಂಗಳ ಹೇಳುತ್ತೇನೆ.

**ಎಂ. ಆರ್. ನರಸಿಂಹನ್**

# ಶೋಧನ ಪತ್ರ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 2 | 13 | ಬೇಡಿದನ | ಬೇಡಿದನು |
| 3 | 11 | ಗಸಾತಲ | ರಸಾತಲ |
| | 22 | ಮಗನನು | ಮಗನನ್ನು |
| 4 | 7 | ದೂಷಯಿನ್ | ದೂಷಯನ್ |
| 9 | 23 | ಲಕ್ಷ್ಮಿಣಾ | ಲಕ್ಷ್ಮಣಾ |
| 12 | 3 | ರಾಮನಾದರೊ | ರಾಮನಾದರೋ |
| | 16 | ಸಂಪ್ರಾಪ್ರದ | ಸಂಪ್ರಾಪ್ರ |
| 19 | 7 | ಕೃತ್ವಾತ್ವ | ಶ್ರುತ್ವಾ |
| | 16 | ರಾಜಾಯ | ರಾಜ್ಯಾಯ |
| 20 | 19 | ಭರತ | ಭರತಃ |
| 23 | 17 | ಸ | ಸಃ |
| 24 | 7 | ತತ್ರಾಭ್ಯೈ ತ್ಯೈ | ತತ್ರಾಭ್ಯೇ ತ್ಯೈಲ |
| | 9 | ಏತದಾ | ಏಕದಾ |
| 26 | 20 | ಸಮುಯಾಚಿತ | ಸಮುಯಾಚತ |
| 27 | 11 | ರೂಪಮಸ್ಥಿತಃ | ರೂಪಮಾಸ್ಥಿತಃ |
| | 18 | ಸಮುತ್ಯಜಿತ್ | ಸಮುತ್ಯಜತ್ |
| 28 | 5 | ತದನಂತರಂ | ತದಂತರಂ |
| 29 | 6 | ಅಶೋಕವನಿಕಾಃ | ಅಶೋಕವಕಾ |
| | 8 | ನಿಶಾಚರೀ ಚ | ನಿಶಾಚರೀಃ ಚ |
| | 17 | ದುಃಖಾರ್ತಾಃ | ದುಃಖಾರ್ತಃ |
| 32 | 20 | ಮಾಲಿನಂ | ವಾಲಿನಂ |
| 35 | 20 | ರಾನನು | ರಾಮನು |
| 39 | 2 | ಸುಂದರಕಾಂಡಃ | ಸುಂದರಕಾಂಡ |
| | 8 | ವಿಪ್ಲುವೇ | ಪಪ್ಲುವೇ |
| | 16 | "ನಿಹತ್ಯ" ಎನ್ನುವುದಕ್ಕೆ ಮೊದಲು | "ನೀತ್ಯಾ=ತಂತ್ರದಿಂದ" ಎಂದು ಸೇರಿಸಿಕೊಳ್ಳಬೇಕು |
| 40 | 7 | ತ | ತತ್ರ |
| | 18 | ಪಲಾಶೈ | ಪಲಾಶೈಃ |
| 41 | 1 | ತಿದಾ, ಮವ | ತದಾ, ಮಮ |
| | 9 | ನಸ್ವಾಂ | ನಸ್ಯಾಂ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 43 | 14 | ದೀಪೀತ | ದೀಪಿತ |
| 47 | 16 | ನ್ಯಯುಂಕ್ತಾ | ನ್ಯಯುಂಕ್ತ |
| 49 | 8 | ಔಷಧಿ | ಚೌಷಧಿ |
| | 12 | "ಅಲ್ಲ" ಆದನಂತರ | "ಸಃ = ಅವನು" ಎಂದು ಸೇರಿಸಿಕೊಳ್ಳಬೇಕು |
| 50 | 2 | ರುಷಾಧ್ವಿತಃ | ರುಷಾನ್ವಿತಃ |
| | | ಕೂಡಿಸ | ಕೂಡಿ |
| | 9 | ನಿತಂಭಂ | ನಿಕುಂಭಂ |
| | 14 | ಧಿತ | ಚ |
| 55 | 2 | ಬೇದಯಾವಾಸ | ಬೇಧಯಾವಾಸ |
| 56 | 13 | ಪದಾತನ್ | ಪದಾತಿನ್ |
| | 22 | ಕಾಂರಾಗೃಹ | ಕಾರಾಗೃಹ |
| 57 | 13 | ತ್ವ | ಕ್ವ |
| | 14 | ತೇನ ವಿಲಂಬಿತಂ | ತೇ ನವಿಲಂಬಿತಂ |
| 58 | 12 | ಅವಷ್ಯಭ್ಯ | ಅವಷ್ಟಭ್ಯ |
| | 15 | do | do |
| 59 | 5 | ನನ್ನನ್ನು | ನನ್ನ |
| | 20 | ಸಮಾರುಹನ್ ? | ಸಮಾರುಹಸ್ |
| 63 | 10 | ಪುಷ್ಪಕ | ಪುಷ್ಪಂ |
| 69 | 3 | ದೂಷಿತಾಂ | ದೂಷಿತಾಂ" |
| | 11 | ತದ್ವಿದ್ವಿತ್ವಾಽಥ | ತದ್ವಿದಿತ್ವಾಽಥ |
| | 26 | ವತಾನ್ | ಏತಾನ್ |
| 72 | 1 | ರವಿ | ಕವಿ |
| | 2 | ವಾಖ್ಯಾಕಂ | ವಾಖ್ಯಾತಂ |
| | 3 | ವಂದಧಿಯಾಂ | ವಂದಧಿಯಾ |
| | [illegible] | ಸಮೀಕ್ಷಿಸಲ್ಪಟ್ಟ | ಸಮೀಕ್ಷಿಸಲ್ಪಟ್ಟು |

(ಕೆಲವೆಡೆ [illegible]ದವಿಭಾಗದಲ್ಲಿ ತಪ್ಪಿದೆ. ಉದಾ: 38ನೇ ಪುಟದಲ್ಲಿ [illegible]ರ[illegible]ನ್ವಂತಃ ಎಂಬುದು ಪ್ರಾಪುರುದನ್ವಂತಃ ಎಂದಾಗಬೇಕು ಇತ್ಯಾದಿ. [illegible]ಂತಹವುಗಳನ್ನು ವಾಚಕರು ಸರಿಪಡಿಸಿಕೊಂಡು ಸಹಕರಿಸ[illegible] [illegible]ೋರಿಕೆ.)

## ಲೇಖಕರ ಇತರ ಕೃತಿಗಳು

೧. ಆಳ್ವಾರುಗಳು ಕಂಡ ತಿರುವೇಂಗಡಂ

೨. ಶ್ರೀ ರಾಮಾಯಣ ಸಂಗ್ರಹ